ಧಾರವಾಡದ ಶಿಕ್ಷಣಸಮಿತಿಯ ೧೫ನೆಯ ಗ್ರಂಥ.

# ಕುರುಡ ಧರ್ಮ

( ಸಾಮಾಜಿಕ ಕಾದಂಬರಿ)




ಲೇಖಕರು:

**ನಾರಾಯಣ ಭೀಮರಾವ ನಾಡಗೀರ,** ಬಿ. ಎ. ಧಾರವಾಡ.



ಪ್ರಕಾಶಕರು:

ಧಾರವಾಡದ ಕರ್ನಾಟಕ ಶಿಕ್ಷಣಸಮಿತಿ

**ಬೆಲೆ ೧೨-೦-೦**

ಮುದ್ರಕರು:— ಕೆ. ಜಿ. ರಾಯದುರ್ಗ,

ಮುದ್ರಣಾಲಯ -- ಜಯಕರ್ನಾಟಕ ಪ್ರೆಸ್ ಸಾಧನಕೇರಿ, ಧಾರವಾಡ.

ಪ್ರಕಾಶಕರು:— ಸು. ಶಿ. ದೇಸಾಯಿ ಕಾರ್ಯದರ್ಶಿ ಕರ್ನಾಟಕ ಶಿಕ್ಷಣ ಸಮಿತಿ

ಪ್ರಕಾಶನ ಸ್ಥಳ:- ಶಿಕ್ಷಣ ಸಮಿತಿಯ ಆಫೀಸು ಮಂಗಳವಾರಪೇಟ, ಧಾರವಾಡ.

# ಪ್ರಕಾಶಕರ ಎರಡು ಮಾತುಗಳು.

ವೈದಿಕಧರ್ಮದ ಹೆಸರಿನಿಂದ ಎಷ್ಟೋ ಸಣ್ಣ ದೊಡ್ಡ ಅನಾಚಾರಗಳು ನಮ್ಮ ಹಿಂದೂ ಸಮಾಜದಲ್ಲಿ ನಡೆಯುತ್ತಲಿವೆ; ಸಮಾಜದ ಕರುಳನ್ನೇ ಕತ್ತರಿಸುತ್ತಲಿವೆ. ಶಾಸ್ತ್ರಿಗಳೂ ಪಂಡಿತರೂ ಕೂಡ ಕಂಡೂ ಕಾಣದವರಂತೆ ಅವುಗಳನ್ನು ತಮ್ಮ ಆಚರಣೆಯಿಂದ ಪೋಷಿಸುತ್ತಲಿದ್ದಾರೆ. ಮೊದಲಿನ ವೈದಿಕಧರ್ಮದಲ್ಲಿ ಬಲವಿತ್ತು, ತೇಜವಿತ್ತು, ಜೀವವಿತ್ತು, ವಿವೇಕವಿತ್ತು. 'ವಿವೇಕಭ್ರಷ್ಟಾನಾಂ ಭವತಿ ವಿನಿಪಾತಃ ಶತಮುಖಃ' ಎಂಬಂತೆ ಕಾರ್ಯ ಕಾರಣಾಭಾವದ ಸಾರಾಸಾರ ವಿಚಾರಕ್ಕೆ ಶರಣು ಹೊಡೆದು ಕುರುಡ ನಂಬಿಕೆಯನ್ನು ನಮ್ಮ ಸಮಾಜವು ಹಿಡಿದಂದಿನಿಂದಲೇ ವೈದಿಕಧರ್ಮವು ಅಳಿದು ಪುರಾಣಧರ್ಮದ ಕೀಳುಕಾಲಕ್ಕೆ ನೂಕಲಾಯಿತು. ಎಷ್ಟು ಕಹಿಯಾಗಿದ್ದರೂ ಅಜ್ಜ ಕಟ್ಟಿದ ಬಾವಿಯ ನೀರೆಂದು ಹಿಗ್ಗಿನಿಂದ ಕುಡಿಯಲಾರಂಭಿಸಿದೆವು.

ವೈದಿಕಧರ್ಮಕಾಲದಲ್ಲಿ ಪರದೇಶಗಮನ ಸಮುದ್ರಯಾನಗಳು ಪ್ರಚಾರದಲ್ಲಿದ್ದುವಲ್ಲದೆ ನಮ್ಮವರು ಧೈರ್ಯಸಾಹಸಗಳಿಂದ ಪರದೇಶಗಳಲ್ಲಿ ವಸಾಹತುಗಳನ್ನು ಕಟ್ಟಿಕೊಂಡು ಒಕ್ಕಲಾಗಿದ್ದರು. ವರ್ಣವ್ಯವಸ್ಥೆಯು ಗುಣಕರ್ಮಸ್ವಭಾವಗಳನ್ನು ಅವಲಂಬಿಸಿತ್ತು. 'ದೈವಾಯತ್ತಂ ಕುಲೇ ಜನ್ಮ ಮದಾಯತ್ತಂ ತು ಪೌರುಷಂ' ಎಂದು ಜನ್ಮಕ್ಕೆ ಮಹತ್ವವನ್ನು ಕೊಡದೆ ಪೌರುಷವನ್ನು ಮನ್ನಿಸುತ್ತಿದ್ದರು. 'ಯತ್ರ ನಾರ್ಯಸ್ತು ಪೂಜ್ಯಂತೆ ರಮಂತೆ ತತ್ರ ದೇವತಾಃ' ಎಂಬಂತೆ ಸ್ತ್ರೀಯರಿಗೆ ಮನ್ನಣೆಯಿತ್ತು; ಸ್ವಾತಂತ್ರ್ಯವಿತ್ತು; 'ಗೃಹದೇವತೆ'ಯ ಗೌರವವಿತ್ತು. ನಿಸರ್ಗದೇವತೆಯ ಉಪಾಸನವೇ ಪ್ರಬಲವಾಗಿತ್ತು. ಗುಡಿಗುಂಡಾರಗಳ ಆಡಂಬರವಿದ್ದಿಲ್ಲ ಅನೇಕದೇವತೆಗಳ ಗಡಿಬಿಡಿಯಿದ್ದಿಲ್ಲ. ಮಡಿಮೈಲಿಗೆಯ ಹುರುಳಿಲ್ಲದ ಬೊಂಬಾಟವಿದ್ದಿಲ್ಲ. ಈಗ 'ಅಡಿಗೆ ಮನೆ'ಯ, 'ಊಟ ಉಡಿಗೆ'ಯ 'ಮುಟ್ಟಿ ಮುಟ್ಟೇ' ಕುರುಡ ಧರ್ಮವು ಆಗ ತೋರಿದ್ದಿಲ್ಲ. ಜಾತಿಮತ್ಸರವೂ ಮತಮತಾಂತರಗಳ ಕೋಲಾಹಲವೂ ಇದ್ದಿಲ್ಲ. ಪರಧರ್ಮವನ್ನು ಸ್ವೀಕರಿಸಿದ ಸ್ವಮತಸ್ಥರನ್ನು ಹಿಂತಿರುಗಿ ಸ್ವಧರ್ಮದಲ್ಲಿ ಸ್ವೀಕರಿಸುತ್ತಿದ್ದ

ರಿಷ್ಟೇ ಅಲ್ಲ; ಮೂಲತಃ ಪರಧರ್ಮೀಯರನ್ನು ಕೂಡ 'ವಿಶ್ವಮಾರ್ಯಂ ಕುರ್ಯಾತ್' ಎಂದು ಜಗತ್ತಿನಲ್ಲೆಲ್ಲ ಆರ್ಯಧರ್ಮವನ್ನೇ ಬೀರಬೇಕೆಂಬ ಹೆಮ್ಮೆಯಿಂದ ಮುಂದೆ ನುಗ್ಗುತ್ತಿದ್ದರು. ಸಮಾಜಕ್ಕೊಂದು, ಜಾತಿಗೊಂದು, ಮುಳ್ಳುಬೇಲಿಯ ಗೋಡೆಯನ್ನು ಕಟ್ಟಿಕೊಂಡು ಪರಸ್ಪರ್ಶಕ್ಕೆ ಹೆದರಿ ಮುದುಡಿಕೊಳ್ಳುವಷ್ಟು ಪುಕ್ಕರೂ ಹೇಡಿಗಳೂ ಮೂಢರೂ ಇದ್ದಿಲ್ಲ. ಸಮಾಜವೇ ದೇವತೆ, ಸಮಾಜ ಸೇವೆಯೇ ದೇವತೋಪಾಸನೆ, ಸ್ವರಾಜ್ಯವೇ ಇಷ್ಟದೇವತೆಯಾಗಿತ್ತು ಆಗ. ಅಂತಃಶುದ್ಧಿಗೂ ಸದಾಚರಣೆಗೂ ಶುದ್ಧ ಮನೋಭಾವನೆಗಳಿಗೂ ಮಹತ್ವವಿತ್ತಲ್ಲದೆ ಹೊರಗಣ ಆಡಂಬರಕ್ಕಲ್ಲ, ವೇಷಕ್ಕಲ್ಲ. ಪಂಚಮವರ್ಣವೂ ಅಸ್ಪೃಶ್ಯತೆಯೂ ಕನಸು ಮನಸಿನಲ್ಲಿದ್ದಿಲ್ಲ.

ಈ ದಿವ್ಯ ತೇಜೋಮಯ ವೈದಿಕ ಆರ್ಯಧರ್ಮದ ಕಾಲವು ಪುನಃ ಈ ನಮ್ಮ ಪುಣ್ಯ ಭರತಭೂಮಿಯಲ್ಲಿ ಎಂದು ಪ್ರಸ್ಥಾಪಿತವಾಗುವದೋ ವಿವೇಕಯುಗವು ಎಂದು ಉದಯವಾಗುವದೋ ಎಂದು ಹಂಬಲಿಸುವವರು ಈಗ ಅಲ್ಲಲ್ಲಿ ಕಂಗೊಳಿಸುತ್ತಲಿದ್ದಾರೆ. ಅಂಥವರಲ್ಲಿ ನಮ್ಮ ಕಥಾನಾಯಕ ರಾವ ಬಳವಂತರಾಯರೊಬ್ಬರು. ಅಲ್ಲದ ಸಲ್ಲದ ಅನಾಚಾರಗಳಿಂದ ದ್ರವ್ಯ ಸಂಚಯವನ್ನು ಮಾಡಿ, 'ಸೂಳೆ ಮುಪ್ಪಾಗಿ ಜೋಗತಿ' ಯಾದಂತೆ ಮುಪ್ಪಿನಲ್ಲಿ ಧಾರ್ಮಿಕರ ಸೋಗಿನಿಂದ ಪೂಜಾವಿಸ್ತಾರ, ಅಂಗಾರ ಅಕ್ಷತೆ, ಬ್ರಾಹ್ಮಣರಿಗೆ ಅನ್ನಸಂತರ್ಪಣೆ, 'ದಾನ ಧರ್ಮ'ವನ್ನು ಮಾಡುತ್ತ ಕೈಲಾಸಕ್ಕೋ ವೈಕುಂಠಕ್ಕೋ ದಾರಿಯನ್ನು ಕಂಡುಕೊಳ್ಳಲೆತ್ನಿಸುವ, 'ಮುಟ್ಟರ ಮುರಕೀ' ಕುರುಡಧರ್ಮದ ಮೂರ್ತಿಮಂತ ಅವತಾರವನ್ನು ಕರ್ಮಠ ಮಾಧವರಾಯರಲ್ಲಿ ಕಾಣಬಹುದು. ನೂಲಿನೆಳೆಯು ತಾಕಿದರೆ ಮೈಲಿಗೆ, 'ಕಡೆಗಾದವರ' ದನಿಯು ಕೇಳಬಂದರೆ ಪಾಪವೆಂದು ಕೊರಗುವ ಮಾಧವರಾಯರ ಹಿರಿಯ ಮಗಳಲ್ಲಿ ಮೂಢಧರ್ಮಕ್ಕೆ ಬಲಿಬಿದ್ದ ಆಧುನಿಕ ವಿಧವೆಯನ್ನು ಕಾಣಬಹುದು.

ಇಂಥ ಸಾಮಾಜಿಕ ಚಿತ್ರವು ಕನ್ನಡ ವಾಙ್ಮಯಕ್ಕೊಂದು ಕೊರತೆಯಾಗಿತ್ತು. ಸಮಾಜ ರಕ್ಷಣಕಾರ್ಯದಲ್ಲಿ ಕಥೆ ಕಾದಂಬರಿಗಳು ಉತ್ತಮ ಸಾಧನೆಗಳಾಗಿವೆ. ಈ ಕೊರತೆಯನ್ನು ಕೆಲವು ಮಟ್ಟಿಗಾದರೂ ಹೋಗ

ಶ್ರಮಿಸಿದ್ದಕ್ಕಾಗಿ ಗ್ರಂಥಕರ್ತರಿಗೆ ನಾವು ಧನ್ಯವಾದಗಳನ್ನರ್ಪಿಸುತ್ತೇವೆ. ವಿಷಯಕ್ಕೆ ತಕ್ಕಂತೆ ಭಾಷೆಯು ಸುಲಭವೂ ಸುಲಲಿತವೂ ಮನೋಹರವೂ ಆಗಿರುವದು. ಕನ್ನಡಿಗರು ಇದನ್ನು ಚನ್ನಾಗಿ ಮನ್ನಿಸಿ ವೈದಿಕ ಆರ್ಯ ಧರ್ಮವನ್ನು ಎದುರುಗೊಂಡು ಕರೆದುಕೊಂಡು ಬರಲು ಮುಂದಾಗುವ ರೆಂದು ನಾವು ಹಾರೈಸುತ್ತೇವೆ.

ಧಾರವಾಡ
ತಾ. ೧-೪-೧೯೩೩

ಸುರೇಂದ್ರ ಶಿವರಾವ ದೇಸಾಯಿ
ಕಾರ್ಯದರ್ಶಿ
**ಕರ್ನಾಟಕ ಶಿಕ್ಷಣಸಮಿತಿ ಧಾರವಾಡ.**

# ಪರಿವಿಡಿ.

—೦—

ಪ್ರಕರಣ.

# ಸಾಕು! ಈ ಹಾಳು ಕುರುಡಧರ್ಮ

## ೧

### ಕರ್ಮಠರಾದ ಮಾಧವರಾಯರು.





ಪಂಜಾಬ ಮೇಲಗಾಡಿಯ ವೇಗದಿಂದ ಪುರೋಹಿತ ರಾಮಭಟ್ಟರು ಪೂಜಾಮಂತ್ರದ ಗಾಡಿಯನ್ನು ಗುಡುಗುಡು ಉರುಳಿಸುತ್ತಿದ್ದರು. ಯಜಮಾನರಾದ ಮಾಧವರಾವ ಜೋಶಿ ರಿಟಾಯರ್ಡ ಮಾಮಲೇದಾರರು ದೇವರ ಪೂಜೆ ನಡಿಸಿದ್ದರು. ತಾವು ಅನ್ನುವ ಮಂತ್ರಕ್ಕೂ ಯಜಮಾನನು ಮಾಡುವ ಪೂಜಾವಿಧಾನಕ್ಕೂ ಮೇಳವಿದೆಯೋ ಇಲ್ಲವೋ ಇದರ ಕಡೆಗೆ ರಾಮಭಟ್ಟರ ಲಕ್ಷ್ಯವೇ ಇದ್ದಿಲ್ಲ. ಅವರಾದರೂ ಇದೆಲ್ಲ ಉಸಾಬರಿ ಯಾಕೆ ಮಾಡುತ್ತ ಕೂಡಬೇಕು? ಮಂತ್ರವನ್ನು ಹೇಗೆ ಹೇಳಿದರೂ ಅವರಿಗೆ ನಿತ್ಯದಲ್ಲಿ ದೊರೆಯುವ ಎರಡಾಣೆ ದಕ್ಷಿಣೆಗೇನೂ ಬಾಧೆಯಿಲ್ಲ. ರಾಮಭಟ್ಟರು ಮಂತ್ರಪಠನಕ್ಕೆ ಆರಂಭಮಾಡಿದರೆಂದರೆ ಹಾಡುವ ಯಂತ್ರಕ್ಕೆ ಕೀಲೀಕೊಟ್ಟಹಾಗೆ. ಆ ಮಂತ್ರವು ಮುಗಿದ ಮೇಲೆ ರಾಮಭಟ್ಟರಿಗೆ ತಮ್ಮ ಮಂತ್ರವು ಎಲ್ಲಿಯತನಕ ಬಂತೆಂಬದರ ಅರಿವುಂಟಾಗುತ್ತಿತ್ತು.

ಇತ್ತಕಡೆಗೆ ರಾಮಭಟ್ಟರ ಯಜಮಾನರು ಇನ್ನೂ ಪಂಚಾಮೃತಾಭಿಷೇಕದ ವರೆಗೆ ಬಂದಿದ್ದರು. ಅವರ ಕೈಗಳು ಮಂತ್ರದ ಕ್ರಮವನ್ನನುಸರಿಸದೆ ರೂಢಿಯ ಮೂಲಕ ಕೇವಲ ಯಂತ್ರದಂತೆ ಒಂದರಹಿಂದೊಂದು ಕೆಲಸ ನಡೆಸಿದ್ದವು. ಇಬ್ಬರ ಬಾಯಿಕೈಗಳ ಪೂಜೆಯಲ್ಲಿ ಶಿಕ್ಕು ಮಂಟಪದೊಳಗಿನ ೨೦-೨೫ ದೇವತೆಗಳು ಯಾವತರದ ಉಪಚಾರವನ್ನು ಹೊಂದುತ್ತಿದ್ದರೆಂಬದನ್ನು ವಾಚಕರೇ ಊಹಿಸಬೇಕು.

ಮಾಧವರಾಯರು ಒಳ್ಳೇ ಸ್ಥೂಲದೇಹಿಗಳು. ಅವರ ವಯಸ್ಸು ಅರುವತ್ತು ಮೀರಿತ್ತು. ಆದರೂ ಚಿಕ್ಕವಯಸ್ಸಿನಿಂದ ಸಾಧಾರಣ ಐವತ್ತುವರ್ಷಗಳಾಗುವ ವರೆಗೆ ಅವರ ನಿತ್ಯದ ನೂರಾಎಂಟು ಸೂರ್ಯನಮಸ್ಕಾರಗಳು ಎಂದೂ ತಪ್ಪಿದ್ದಿಲ್ಲ. ಆದ್ದರಿಂದ ಅವರ ಶರೀರಯಷ್ಟಿಯು ಸುದೃಢವಾಗಿತ್ತು. ಇದರ ಬಗ್ಗೆ ರಾಯರಿಗೆ ಬಹಳ ಅಭಿಮಾನ. "ನಾನು ಐವತ್ತು ವರ್ಷದವನಾಗುವವರೆಗೆ ಎರಡು ಹೊತ್ತು ಊಟ ಎರಡಾವರ್ತಿ ಫಲಾಹಾರವನ್ನು ಜೀರ್ಣಿಸುತ್ತಿದ್ದೆ. ಮೊನ್ನೆ ಮೊನ್ನಿನವರೆಗೆ ನಾನು ಕಡಾಕಡಾ ಕಬ್ಬು ತಿನ್ನುತ್ತಿದ್ದೆ." ಎಂದು ಮುಂತಾಗಿ ಅವರು ಇತ್ತ ಕಡೆಯ ತರುಣರನ್ನು ಉದ್ದೇಶಿಸಿ ಹೇಳುವವನ್ನು ಎಲ್ಲರೂ ಕೇಳಿದ್ದರು. ಮಾಧವರಾಯರ ಮೈಬಣ್ಣ ಕೆಂಪು. ಅವರ ತಲೆಯ ಕೂದಲು, ಮೀಸೆಗಳೂ ಮುಪ್ಪಿನಿಂದ ಈಗ ಹಣ್ಣಾಗಿದ್ದವು. ಮೋರೆಯ ಮೇಲೆ ವಾರ್ಧಕ್ಯ ರೇಖೆಗಳು ಮೂಡತೊಡಗಿದ್ದವು. ಇಷ್ಟಾದರೂ ಯಾರಾದರೂ ಅವರ ಮೋರೆಯನ್ನು ನೋಡಿದರೆ, ಅವರು ಪೂರ್ವ ವಯಸ್ಸಿನಲ್ಲಿ ಒಳ್ಳೇ ಸುಸ್ವರೂಪರೂ ಸುಖಜೀವನದಲ್ಲಿ ಬೆಳೆದವರೂ ಆಗಿದ್ದರೆಂಬ ಮಾತು ಒಮ್ಮೆಲೇ ಹೊಳೆಯುಬಹುದಾಗಿತ್ತು.

ಪೂಜೆಯ ಕಾಲದಲ್ಲಿ ಮಾಧವರಾಯರು ನಾಲ್ಕು ಬೊಟ್ಟು ಜರದಂಚಿನ ಪೀತಾಂಬರವನ್ನುಟ್ಟಿದ್ದರು. ಅದರ ಬಣ್ಣ ಹೇಳುವದು ಸ್ವಲ್ಪ ಸಾಹಸದ ಕೆಲಸ. ಯಾಕಂದರೆ ಅದು ಮೂಲತಃ ಕೆಂಪು ಬಣದ್ದಾದರೂ ಈಗ ಅದಕ್ಕೆ ನೀಲೀ ಅನ್ನಬೇಕೋ ಕಪ್ಪು ಅನ್ನಬೇಕೋ ಎಂಬ ಸಂಶಯವುಂಟಾಗುತ್ತಿತ್ತು. ಆ ಮಹಾವಸ್ತ್ರವು ಎಂದು ನೀರುಬಿಸಿಲುಗಳನ್ನು ಕಂಡಿತ್ತೋ ಹೇಳುವದಸಾಧ್ಯವೇ ಸರಿ.

ರಾಮುಭಟ್ಟರು ಯಜಮಾನರಿಗಿಂತ ಕಿಂಚಿತ್ ಸ್ಥೂಲದೇಹಿಗಳಾಗಿದ್ದರು. ಅವರ ಹೊಟ್ಟೆಯು ಧಾರಾಳವಾಗಿ ಮುಂದಕ್ಕೆ ಬಂದಿತ್ತು. ಅವರೊಂದು ಅತಿಶಯ ಹೊಲಸಾದ ಧಾಬಳಿಯನ್ನು ಟೊಂಕಕ್ಕೆ ಸುತ್ತಿಕೊಂಡಿದ್ದರು. ಅದು ಮೊಣಕಾಲಿನ ವರೆಗೆ ಸಹ ಬಂದಿದ್ದಿಲ್ಲ. ಇದರ ಹೊರ್ತು ಭಟ್ಟರ ಮೈಮೇಲೆ ಎರಡನೇ ಅಂಗವಸ್ತ್ರವೇನೂ ಇದ್ದಿಲ್ಲ.

ರಾಮುಭಟ್ಟರ ವಯಸ್ಸು ನಾಲ್ವತ್ತೈದು ಐವತ್ತು ಇರಬಹುದು.

ಅವರ ಮೋರೆಯ ಮೇಲೆ ನಿಶ್ಚಿಂತತನದ ಲಕ್ಷಣಗಳಿದ್ದವು. ಮೂಗೂ ಕಣ್ಣೂ ಮನುಷ್ಯ ಮಾತ್ರರಿಗಿರುವಂತೆ ಇದ್ದವು. ಅವುಗಳಲ್ಲಿ ಏನೂ ವಿಶೇಷವಿದ್ದಿಲ್ಲ. ಅವರನ್ನು ನೋಡಿದವರಿಗೆ ಅವರಲ್ಲಿ ಪಾವಿತ್ರ್ಯದ ಅಂಶವೇನೂ ತೋರದೆ ಸ್ವಾರ್ಥ, ಧನಲೋಭ, ಶಿಥಿಲನೀತಿ, ಇವುಗಳ ಕಲ್ಪನೆಯೇ ಹೊಳೆಯಬಹುದಾಗಿತ್ತು.

ಮಾಧವರಾಯರ ಮನೆಯು ಬಹಳ ದೊಡ್ಡದು. ಅದು ಹಳೇ ಪದ್ಧತಿಯ ಕಟ್ಟಡವು. ಆದ್ದರಿಂದ ಮನೆಯೊಳಗಿನ ಎಷ್ಟೋ ಕೋಣೆಗಳಲ್ಲಿ ಸೂರ್ಯದರ್ಶನವಷ್ಟೇ ಏಕೆ, ಚನ್ನಾಗಿ ಬೆಳಕು ಸಹ ಇದ್ದಿಲ್ಲ. ಮನೆಗೆ ದೊಡ್ಡ ದೊಡ್ಡ ಉಪ್ಪರಿಗೆಗಳಿದ್ದರೂ ದೇವರ ಪಾಲಿಗೆ ಮಾತ್ರ ಒಂದಂಕಣದ ಕತ್ತಲೆಕೋಣೆಯು ಬಂದಿತ್ತು. ದೇವರ ಮನೆಯ ಮೂಲೆಯಲ್ಲಿ ಒಂದು ಸಮೆಯು ಮಿಣಿಮಿಣಿ ಉರಿಯುತ್ತಿತ್ತು. ದೇವರ ಮಂಟಪದ ಎರಡೂ ಬದಿಗಳಿಗೆ ಉಪಕರಣದ ಪಾತ್ರೆಗಳು, ಸಾಣೀ ಕಲ್ಲು, ಗಂಧವಕೊರಡು, ಗಂಧ ಧೂಪಗಳ ಡಬ್ಬಿಗಳು ಮುಂತಾದ ಅನೇಕ ಸಾಮಾನುಗಳು. ಗೋಡೆಗೆ ಹೊಂದಿಸಿದ ನಾಗೊಂದಿಗೆಯ ಮೇಲೆ ಹಪ್ಪಳ ಸಂಡಿಗೆ ಶಾವಿಗೆ ಮುಂತಾದ ಮಡಿಯ ಪದಾರ್ಥಗಳು. ನಾಗೊಂದಿಗೆಯ ಕೆಳಬದಿಗೆ ಗೂಟಗಳ ಮೇಲೆ ಗಂಡಸರ ಮಡಿಗಳು, ಹೆಣ್ಣುಮಕ್ಕಳ ಮಡಿಯ ವಸ್ತ್ರಗಳ ಗಂಟುಗಳು. ಅವುಗಳಲ್ಲಿ ಎಷ್ಟೋ ದಿವಸ ಕೈಯಾಡದ ವಸ್ತುಗಳ ಮೇಲೆ ಜೇಡುಹುಳದ ಜಾಳಿಗೆಗಳು.

ಮಾಧವರಾಯರು ಒಳ್ಳೇ ಕರ್ಮಠ ಬ್ರಾಹ್ಮಣರೆಂದು ಶಂಕರಪುರದಲ್ಲಿ ತುಂಬಾ ಪ್ರಸಿದ್ಧಿ. ಶಂಕರಪುರವೇ ಅವರ ಮೂಲ ಊರು. ಅವರ ಇಂಗ್ಲೀಷ ಅಭ್ಯಾಸವು ಐದನೇ ತರಗತಿಯ ವರೆಗೆ ಆಗಿದ್ದರೂ ಅಷ್ಟರಿಂದಲೇ ಅವರು ಮುಲ್ಕೀ ಖಾತೆಯಲ್ಲಿ ಕಾರಕೂನಿಯಿಂದ ಮಾಮಲೇದಾರಿಯ ವರೆಗೆ ಏರಿ ಕೆಲಸದಿಂದ ನಿವೃತ್ತರಾಗಿದ್ದರು. ಮಾಮಲೇದಾರಸಾಹೇಬರು, ಬಡಜನರಿಗೆ ಯಮ, ವರಿಷ್ಠ ಅಧಿಕಾರಿಗಳಿಗೆ ದಾಸಾನುದಾಸ - ಹೀಗೆ ಹೆಸರುವಾಸಿಯಾಗಿದ್ದರು. ನ್ಯಾಯವಿಚಾರಣೆಯಲ್ಲಿ ಯಾರು ಹೆಚ್ಚು ಹಣ ಕೊಡುವರೋ ಅವರಿಗೆ ಅನುಕೂಲವಾಗಿಯೇ ಮಾಮಲೇದಾರರು ತಮ್ಮ ತೀರ್ಪನ್ನು ಕೊಡುತ್ತಿದ್ದರು. ಅವರ

ದ್ರವ್ಯಪಕ್ಷಪಾತದಿಂದ ಎಷ್ಟೋ ಬಡಜನರ ಮನೆತನಗಳು ಮುಳುಗಿ ಹೋಗಿದ್ದವು. ಯಾರಾದರೂ ಮಾಮಲೇದಾರಸಾಹೇಬರನ್ನು ಎದುರಿಸಿದರೆ ಅವರ ಮೇಲೆ ಒಂದಿಲ್ಲೊಂದು ಪೇಚು ಬರುವದು ನಿಶ್ಚಯ. ಈ ಪ್ರಕಾರ ಸಾಹೇಬರ ಬೇಳೆಯು ಚನ್ನಾಗಿ ಬೆಂದು ಅವರು ಕೆಲಸದಿಂದ ನಿವೃತ್ತರಾಗುವ ಪೂರ್ವದಲ್ಲಿ ಬಹಳ ದುಡ್ಡನ್ನು ಗಳಿಸಿಕೊಂಡು ತಮ್ಮ ಪೂರ್ವಜರ ಊರಾದ ಶಂಕರಪುರದಲ್ಲಿ ಬಂದು ವಾಸವಾಗಿದ್ದರು. ಅಲ್ಲಿಗೆ ಬಂದು ಸ್ವಲ್ಪ ದಿವಸಗಳಲ್ಲಿಯೇ ಏನೇನೋ ಕುಟಿಲ ತಂತ್ರಗಳನ್ನು ರಚಿಸಿ ಒಂದು ವಿಶಾಲವಾದ ವಾಡೆಯನ್ನು ಸ್ವಲ್ಪ ಬೆಲೆಯಲ್ಲಿಯೇ ದೊರಕಿಸಿದರು. ಮುಂದೆ ಊರ ಹತ್ತರ ಕೆಲವು ಭೂಮಿಗಳನ್ನು ಕೊಂಡುಕೊಂಡರು. ಈ ಪ್ರಕಾರ ಹೊಲಮನೆಯ ಮೇಲ್ವಿಚಾರಣೆ ಮತ್ತು ಧರ್ಮಕರ್ಮ ಇವುಗಳಲ್ಲಿಯೇ ತಮ್ಮ ಆಯುಷ್ಯದ ಉಳಿದ ಭಾಗವನ್ನು ಕಳೆಯುತ್ತಿದ್ದರು.

ಮಾಧವರಾಯರು ಕೆಲಸದಿಂದ ನಿವೃತ್ತರಾಗಿ ಊರಿಗೆ ಬಂದ ಕೂಡಲೆ ತಮ್ಮ ಅಧಿಕಾರ ದರ್ಪವನ್ನು ಬಿಟ್ಟುಕೊಟ್ಟು ಊರ ಜನರೊಡನೆ ಬಹಳ ಸಭ್ಯ ರೀತಿಯಿಂದ ನಡೆಯುತ್ತಿದ್ದರು. "ನೋಡಿರಿ, ಮಾಧವರಾಯರು ಎಷ್ಟು ನಮ್ರಸ್ವಭಾವದವರು! ಒಂದಾನೊಂದು ಕಾಲಕ್ಕೆ ಮಾಮಲೇದಾರಿಯನ್ನು ಭೋಗಿಸಿದ್ದರೂ ಈಗ ಎಲ್ಲರೊಡನೆ ಸಮನಾಗಿ ಕೂಡಿಕೊಂಡು ಯಾವಾಗಲೂ ದೇವರು, ಬ್ರಾಹ್ಮಣರು ಅನ್ನುತ್ತಾ ಕಾಲಕಳೆಯುತ್ತಾರೆ!" ಎಂದು ಊರ ಜನರು ಅನ್ನುತ್ತಿದ್ದರು. ಮಾಧವರಾಯರು ಯಾವ ಪ್ರಕಾರ ಶ್ರೀಮಂತಿಕೆಯನ್ನು ಹೊಂದಿದರೆಂಬದು ಕೆಲವು ಜನರಿಗೆ ಗೊತ್ತಿತ್ತು. ಆದರೆ ಇವರ ಧರ್ಮಕರ್ಮನಿಷ್ಠೆಯನ್ನು ನೋಡಿ ಜನರೆಲ್ಲರೂ ಇವರ ಪೂರ್ವೇತಿಹಾಸವನ್ನು ಮರೆತು ಇವರೊಬ್ಬ ಸಚ್ಛೀಲ, ಧರ್ಮಿಷ್ಠ ಬ್ರಾಹ್ಮಣರೆಂದು ಹೊಗಳುತ್ತಿದ್ದರು.

ಮಾಧವರಾಯರು ದಿನಾಲು ಮುಂಜಾನೆ ಐದು ಘಂಟೆಗೆ ಎದ್ದು ಸ್ನಾನ ಸಂಧ್ಯಾ ಪೂಜಾ ಜಪ ಪಾರಾಯಣಗಳನ್ನು ಮುಗಿಸಬೇಕಾದರೆ ಹತ್ತು ಘಂಟೆಯಾಗುತ್ತಿತ್ತು. ಆ ಮೇಲೆ ಅವರು ಹೊಲಕ್ಕೆ ಹೋಗಿ ಹನ್ನೆರಡು ಘಂಟೆಗೆ ತಿರುಗಿ ಬರುತ್ತಿದ್ದರು. ಆ ಮೇಲೆ, ಪುನಃ ಸ್ನಾನ

ನೈವೇದ್ಯ, ವೈಶ್ವದೇವ, ಭೋಜನ. ಇಷ್ಟಾಗಲಿಕ್ಕೆ ಎರಡು ಹೊಡೆಯುತ್ತಿತ್ತು. ಆ ಮೇಲೆ ತಾಸೆರಡುತಾಸು ವಾಮಕುಕ್ಷಿ. ಆನಂತರ ಬರುವ ಹೋಗುವ ಜನರ ಕೂಡ ಹರಟೆಯಾಗಿ ಸಂಜೆಯ ಐದು ಘಂಟೆಯಿಂದ ಪುರಾಣಶ್ರವಣ. ಮುಂದೆ ಸಾಯಂಕಾಲವಾದ ಮೇಲೆ ಮತ್ತೆ ಸಂಧ್ಯಾ, ಪಾರಾಯಣ, ಆರತಿ. ಈ ಪ್ರಕಾರ ರಾಯರ ಬಹಳ ವೇಳೆಯು ಧರ್ಮ ಕರ್ಮಗಳಲ್ಲಿಯೇ ಕಳೆದು ಹೋಗುತ್ತಿತ್ತು.

ಮಾಧವರಾಯರ ಮನೆಯಲ್ಲಿ ಅವರ ಇಬ್ಬರು ಹೆಣ್ಣು ಮಕ್ಕಳು ಮತ್ತು ಒಬ್ಬ ದತ್ತಕಮಗ ಇಷ್ಟು ಜನರಿದ್ದರು. ಅವರ ಪತ್ನಿಯು ಅವರು ಪೆನಶನ್ ತೆಗೆದುಕೊಂಡು ಒಂದೆರಡು ವರ್ಷಗಳಲ್ಲಿ ಸಂಸಾರ ಯಾತ್ರೆಯನ್ನು ಮುಗಿಸಿದ್ದರು. ಈಗ ಅವರ ಮನೆಯ ಎಲ್ಲ ವ್ಯವಸ್ಥೆಯನ್ನು ಅವರ ಹಿರೇ ಮಗಳಾದ ರಂಗೂಬಾಯಿಯು ನೋಡುತ್ತಿದ್ದಳು. ಅವಳ ವಯಸ್ಸು ಮೂವತ್ತೆರಡು ವರ್ಷ. ಚಿಕ್ಕ ಮಗಳಾದ ನರ್ಮದಾಬಾಯಿಯ ವಯಸ್ಸು ಇಪ್ಪತ್ತೈದು ವರ್ಷ. ಅವಳನ್ನು ಗಂಡನು ಬಿಟ್ಟದ್ದರಿಂದ ತವರುಮನೆಯಲ್ಲಿಯೇ ಇರುತ್ತಿದ್ದಳು. ಮಾಧವರಾಯರು ಧರ್ಮಸಂಪ್ರದಾಯವನ್ನು ಬಿಡದೆ ಇವರಿಬ್ಬರ ಮದುವೆಯನ್ನು ಚಿಕ್ಕಂದಿನಲ್ಲಿಯೇ ಅಂದರೆ ಅವರು ಹತ್ತು ವರ್ಷದವರಿದ್ದಾಗಲೇ ಮಾಡಿ ಪಿತೃಧರ್ಮದಿಂದ ಮುಕ್ತರಾಗಿದ್ದರು.

ರಂಗೂಬಾಯಿಯು ಹದಿನೈದು ವರ್ಷದವಳಿದ್ದಾಗ ಅವಳಿಗೆ ವೈಧವ್ಯವು ಪ್ರಾಪ್ತವಾಯಿತು. ಮುಂದೆ ಅತ್ತೆಯ ಮನೆಯಲ್ಲಿ ಮಗಳಿಗೆ ಆಗುವ ಕಷ್ಟಗಳನ್ನು ನೋಡಿ ಗಂಗಾಬಾಯಿಯು ಮಗಳನ್ನು ಕರೆಯಿಸಿಕೊಂಡು 'ಹತಭಾಗಿಯಾದ ರಂಗೂ ಮಂದಿಯ ಕೈಯಲ್ಲಿ ಉರಿಯುವದು ಬೇಡ. ಅವಳು ನನ್ನ ಕಣ್ಣಮುಂದೇ ಇರಲಿ' ಎಂದು ತಮ್ಮ ಹತ್ತಿರವೇ ಇಟ್ಟುಕೊಂಡಿದ್ದಳು. ಗಂಗಾಬಾಯಿಯು ಮುಂದೆ ರೋಗಪೀಡಿತಳಾಗಿ ಹಾಸಿಗೆಯನ್ನು ಹಿಡಿಯಲು ಮನೆಯಲ್ಲಿ ಮಡಿಮೈಲಿಗೆಯನ್ನು ಸಾಗಿಸಲಿಕ್ಕೆ ರಂಗೂಬಾಯಿಯು ಹದಿನೇಳು ವರ್ಷದವಳಿದ್ದಾಗಲೇ ಶುದ್ಧಳಾಗಿ ಎಲ್ಲ ಮಡಿಯ ಕೆಲಸಗಳನ್ನು ನೋಡಿಕೊಳ್ಳ ಹತ್ತಿದಳು.

ನರ್ಮದೆಯ ಲಗ್ನವು ಇದೇ ವೇಳೆಗೆ ಆಯಿತು. ಲಗ್ನವಾದ ಮೇಲೆ ಚಿಕ್ಕವಳೆಂದು ನಾಲ್ಕಾರು ವರ್ಷ ಅವಳು ತವರುಮನೆಯಲ್ಲಿಯೇ ಇದ್ದಳು. ಅನಂತರ ಅವಳು ಗಂಡನ ಮನೆಗೆ ಹೋದಳು. ಮನಸೂರ ಇನಾಮದಾರರ ಮನೆಗೆ ಅವಳನ್ನು ಕೊಟ್ಟಿತ್ತು. ಅವಳ ಗಂಡನಿಗೆ ಎರಡುಸಾವಿರ ರೂಪಾಯಿ ವರದಕ್ಷಿಣೆಯನ್ನು ಎಣಿಸಿದ್ದರು. ಮುಂದೆ ಅಳಿಯನಿಗೆ ಮಾಡುವಪರಲ್ಲಿ ಯಾವದಕ್ಕೂ ಏನೂ ಕಡಿಮೆಯಾಗಿದ್ದಿಲ್ಲ. ಇಷ್ಟಾದರೂ ನರ್ಮದೆಯ ಅತ್ತೆಯು "ಎಂಥ ಬಡವರ ಮಗಳು ನಮಗೆ ಗಂಟು ಬಿದ್ದಳು! ಒಂದು ಮಾಡೋಣವೇ ಮೆಚ್ಚೋಣವೇ? ಎಂಥೆಂಥಾ ಶ್ರೀಮಂತರ ಕನ್ಯೆಗಳನ್ನು ಬಿಟ್ಟು ಇಂಥ ಜೀನನ ಮಗಳನ್ನು ನನ್ನ ಸರದಾರನಿಗೆ ಮಾಡಿದರು. ಏನು ನಮ್ಮ ಗ್ರಹಾಚಾರಾ!" ಎಂದು ಮೊದಲಾಗಿ ನರ್ಮದೆಯ ಮನಸ್ಸಿಗೆ ಚುಚ್ಚುವಂತೆ ಮಾತಾಡುತ್ತಿದ್ದರು. ಇಷ್ಟಾದರೂ ಅತ್ಯಂತ ಸಹನಗುಣವುಳ್ಳ ನರ್ಮದೆಯು ಎಲ್ಲವನ್ನು ಸಹಿಸಿಕೊಂಡಿದ್ದಳು.

ಮುಂದೆ ಕೆಲವು ದಿವಸಗಳ ಮೇಲೆ ಒಬ್ಬ ಜ್ಯೋತಿಷಿಯು ಇನಾಮದಾರರ ಮನೆಗೆ ಬಂದನು. ಅವನಿಗೆ ಎಲ್ಲರ ಜನ್ಮಪತ್ರಿಕೆಗಳನ್ನು ತೋರಿಸಿದರು. ನರ್ಮದೆಯ ಪತ್ರಿಕೆಯನ್ನು ನೋಡಿದ ಕೂಡಲೆ ಅವನ ಮೋರೆಯು ಕಪ್ಪೇರಿತು. "ಹೀಗೇಕೆ ಜೋಯಿಸರೇ?" ಎಂದು ಕೇಳಲು ಮೊದಲು ಹೇಳಲು ಬಹಳ ಅನುಮಾನ ತೋರಿಸಿ ಆ ಮೇಲೆ ಬಹಳ ಆಗ್ರಹವಾದ ಮೇಲೆ- "ಈ ಹುಡುಗಿಯು ಗಂಡನ ಪ್ರಾಣಕಂಟಕಳಾಗುವಳು" ಎಂದು ಹೇಳಿದನು. ಅದಕ್ಕೆ ಉಪಾಯವನ್ನು ಕೇಳಲಾಗಿ "ಗಂಡನು ಇವಳ ಮೋರೆಯನ್ನೇ ನೋಡಕೂಡದು. ಅಂದರೆ ಅವನ ಆಯುಷ್ಯಕ್ಕೆ ಬಾಧೆಯು ತಪ್ಪುವದು" ಎಂದು ಹೇಳಿದನು. ಮುಂದೆ ಸ್ವಲ್ಪ ದಿವಸಗಳಲ್ಲಿಯೇ ಇನಾಮದಾರರು ನರ್ಮದೆಯನ್ನು ತವರು ಮನೆಗೆ ಕಳಿಸಿಬಿಟ್ಟರು.

ಈ ಪ್ರಕಾರ ಎರಡನೇ ಮಗಳ ಸಂಸಾರವು ಹಾಳಾದದ್ದು ನೋಡಿ ಗಂಗಾಬಾಯಿಗೆ ಬಹಳ ದುಃಖವಾಯಿತು. ಅವರು ಸ್ವತಃ ಇನಾಮದಾರರ ಊರಿಗೆ ಹೋಗಿ ಮಗಳ ಅತ್ತೆಗೆ ಪರಿಪರಿಯಿಂದ ಬೇಡಿಕೊಂ

ಡರು. "ನನ್ನ ಮಗಳು ಆಕಳಂತೆ ಇದ್ದಾಳೆ. ಆಕೆಗೆ ಯಾರ ಮನಸ್ಸನ್ನೂ ನೋಯಿಸಿ ಗೊತ್ತಿಲ್ಲ. ಇರುವೆಯಂಥ ಸಣ್ಣ ಹುಳವನ್ನು ಸಹ ಅವಳು ಎಂದೂ ಕೊಂದವಳಲ್ಲ. ಇಂಥವಳು ಗಂಡನ ಪ್ರಾಣವನ್ನು ಹೇಗೆ ಅಪಹರಿಸುವಳು? ನಿಮ್ಮ ಜ್ಯೋತಿಷಿಯು ತಪ್ಪಿರಬಹುದಮ್ಮಾ! ದಯಮಾಡಿ ನನ್ನ ಮಗಳ ಕುತ್ತಿಗೆಯನ್ನು ಕೊಯ್ಯಬೇಡಿರಿ" ಎಂದು ಎಷ್ಟೋ ರೀತಿಯಿಂದ ಹೇಳಿಕೊಂಡರು. ಆದರೆ ಎಲ್ಲಾ ವ್ಯರ್ಥವಾಯಿತು.

ಇದರಿಂದ ಗಂಗಾಬಾಯಿಯವರ ಜೀವನದಲ್ಲಿ ಮತ್ತಿಷ್ಟು ಕತ್ತಲೆಗವಿಯಿತು. ಮುಂದೆ ಅವರು ತೀವ್ರವೇ ಬೇನೆಯಿಂದ ಹಾಸಿಗೆ ಹಿಡಿದರು. ಗಂಡುಮಗನಿಲ್ಲದ್ದರಿಂದ ತಮ್ಮ ಕುಲೋದ್ಧಾರವಾಗದೆಂದು ಚಿಂತಿಸಿ ಗಂಗಾಬಾಯಿಯವರೂ ಮಾಧವರಾಯರೂ ತಮ್ಮ ದಾಯಾದರೊಳಗಿನ ಒಬ್ಬ ಹನ್ನೆರಡು ವರ್ಷದ ಹುಡುಗನನ್ನು ವಿಧಿಪೂರ್ವಕವಾಗಿ ದತ್ತಕ ತೆಗೆದುಕೊಂಡರು. ದತ್ತಕವಾದ ಒಂದು ವರ್ಷದಲ್ಲಿಯೇ ಗಂಗಾಬಾಯಿಯವರು ಇಹಲೋಕಯಾತ್ರೆಯನ್ನು ಮುಗಿಸಿದರು.

ಗೋಪಾಲನೇ ಮಾಧವರಾಯರ ದತ್ತಕ ಮಗನು. ಅವನಿಗೆ ಈಗ ಹದಿನೆಂಟು ವರ್ಷ. ನಿಲುವಿಕೆಯು ಎತ್ತರ ಆದರೆ ಮೈಯಲ್ಲಿ ಮಾಂಸವಿಲ್ಲದೆ ಉದ್ದೋ ಉದ್ದವಾಗಿ ಬೆಳೆದಿದ್ದನು. ರೂಪ ಸುಂದರವೆನ್ನಲಿಕ್ಕೆ ಬರುವಂತಿದ್ದಿಲ್ಲ. ಆದರೆ ಡೌಲಿಗೆ ಮಾತ್ರ ಎಣೆಯಿರಲಿಲ್ಲ. ಅರುವತ್ತು ನಂಬರ ನೂಲಿನ ಕೆಳಗೆ ಇರುವ ಧೋತರಗಳನ್ನು ಉಟ್ಟುಕೊಳ್ಳಬಾರದೆಂದು ಅವನ ಪ್ರತಿಜ್ಞೆ. ಮೈಯಲ್ಲಿ ರೇಶಿಮೆಯ ಪೈರಣು. ಅದಕ್ಕೆ ಬಂಗಾರದ ಬಿರಡಿಗಳು. ಮೇಲೆ ವ್ಹೆನೇಶಿಯನ್ನಾದ ಗಿಡ್ಡ ಕೋಟು. ತಲೆಯ ಮೇಲೆ ಬೈತಲು ತೆಗೆದು ಸುವಾಸಿಕ ತೈಲಗಳನ್ನು ಹಚ್ಚಿದ ಕೂದಲು. ಅದರ ಮೇಲೆ ಗಂಧರ್ವ ನಮೂನೆಯ ಟೊಪ್ಪಿಗೆ. ಕಾಲಲ್ಲಿ ಬೂಟು. ಒಂದು ಕೈಯಲ್ಲಿ ಬಹಳ ಬೆಲೆಯ ತೆಳುವಾದ ಬೆತ್ತ. ಎರಡನೇ ಕೈಯಲ್ಲಿ ಹೊತ್ತಿಸಿದ ಸಿಗಾರೇಟು. ಈ ಪ್ರಕಾರ ವೇಷವನ್ನು ಸಿದ್ಧಗೊಳಿಸದೆ ಗೋಪಾಲನು ಎಂದೂ ಹೊರಗೆ ಹೋಗುತ್ತಿದ್ದಿಲ್ಲ.

ಇಷ್ಟೆಲ್ಲ ಬಾಹ್ಯಾಡಂಬರವನ್ನು ನೋಡಿದ ಮೇಲೆ ಗೋಪಾಲ

ನೊಬ್ಬ ಸುಶಿಕ್ಷಿತ ಪದವೀಧರನಿರಬಹುದೆಂದು ಯಾರಾದರೂ ಊಹಿಸ ಬಹುದಾಗಿತ್ತು. ಆದರೆ ಅದು ಮಾತ್ರ ತಪ್ಪು. ಗೋಪಾಲನು ಇಂಗ್ಲೀಷ ಐದನೇ ತರಗತಿಯಲ್ಲಿದ್ದಾಗ್ಗೆ ಸಾಲೆಗೆ ಶರಣು ಹೊಡೆದನು. ಈ ಪ್ರಕಾರ ಅವನು ವಿದ್ಯಾಭ್ಯಾಸವನ್ನು ತೊರೆಯಲಿಕ್ಕೆ ಒಂದು ನೆವ ಬೇಕಾಗಿತ್ತು. ಅಸಹಕಾರದ ಆಂದೋಲನವು ಅನಾಯಾಸವಾಗಿ ದೇಶ ದಲ್ಲಿ ತಲೆದೋರಲು, ಸಾಲೆಗೆ ಬೇಸತ್ತಿದ್ದ ಗೋಪಾಲನು ಇನ್ನು ಸ್ವಚ್ಛಂ ದವೃತ್ತಿಯ ಸದ್ಗೃಹಸ್ಥ ವರ್ಗದೊಳಗೆ ಸೇರಿದನು. ಓರಿಗೆಯ ಕೆಲವು ಉಡಾಳ ಗೆಳೆಯರೊಡನೆ ಸೇರಿಕೊಂಡು, ಸುಖವಿಲಾಸಗಳಲ್ಲಿ ತೇಲಾಡ ಹತ್ತಿದನು. ನಿತ್ಯ ನಾಲ್ಕಾರು ಸಾರೆ ಚಹಾ ಕುಡಿಯುವದು, ಸ್ನೇಹಿತ ರೊಂದಿಗೆ ಫಳಾರದ ಅಂಗಡಿಗೆ ಹೋಗುವದು, ಸಿಗಾರೆಟ್ ಸೇದುವದು, ಸ್ತ್ರೀಪುರುಷರ ನಡತೆಯ ಬಗ್ಗೆ ಕುತ್ಸಿತವಾದ ಹರಟೆಯನ್ನು ಕೊಚ್ಚು ವದು, ಸಂಜೆಗೆ ಸಿನೇಮಾಗ್ರಹ ಇಲ್ಲವೇ ನಾಟಕಗೃಹಗಳಿಗೆ ಹೋಗು ವದು ಇವೇ ಅವನ ವ್ಯವಸಾಯಗಳು. ಈ ತರಹದ ಜೀವನಕ್ಕೆ ಬೇಕಾದ ದುಡ್ಡನ್ನು ಅವನು ತನ್ನ ದತ್ತಕ ತಂದೆಯಿಂದ ಹೇಗೆ ಸೆಳೆಯ ಬೇಕೆಂಬದು ಅವನಿಗೆ ಬಹಳ ಸಾಧಿಸಿತ್ತು. ಮಾಧವರಾಯರು ಬಹಳ ಕೃಪಣರಾದರೂ ಈ ಮಗನ ಪೀಡೆಯನ್ನು ಹೇಗಾದರೂ ಪರಿಹರಿಸಿಕೊ ಳ್ಳಲಿಕ್ಕೆ ಮೇಲಿಂದ ಮೇಲೆ ಬೇಡಿದ್ದರ ಅರ್ಧ ರೂಪಾಯಿಗಳನ್ನಾದರೂ ಕೊಟ್ಟು ಅವನಿಂದ ಪಾರಾಗಬೇಕಾಗುತ್ತಿತ್ತು.

ಇಷ್ಟೆಲ್ಲ ಮಾಧವರಾಯರ ಗೃಹಸ್ಥಿತಿಯ ವರ್ಣನೆ ಮಾಡುವದ ರೊಳಗೆ ಅವರು ಮಾಡುತ್ತಿರುವ ದೇವರ ಪೂಜೆಯನ್ನೇ ನಾವು ಮರೆತು ಬಿಟ್ಟೆವು. ಆದ್ದರಿಂದ ಇನ್ನು ಅತ್ತಕಡೆಗೆ ತಿರುಗುವಾ.

ರಾಮಭಟ್ಟರ ಮಂತ್ರಪಾಠವು ಮುಗಿಯಿತು. ಆದರೆ ಮುಂದೆ ಕಾಲು ತಾಸಿನ ಮೇಲೆ ಮಾಧವರಾಯರು ಹಾಗೂ ಹೀಗೂ ಲಗುಬಗೆ ಯಿಂದ ಪೂಜೆಯನ್ನು ಮುಗಿಸಿ ರಾಮಭಟ್ಟರಿಗೆ ದಕ್ಷಿಣೆಯನ್ನು ಕೊಟ್ಟು ಅವರನ್ನು ಕಳಿಸಿಕೊಟ್ಟರು. ನಂತರ ಅವರು ಪಾರಾಯಣ ಪುಸ್ತಕ ವಾದ ಭಗವದ್ಗೀತೆಯನ್ನು ವ್ಯಾಸಪೀಠದ ಮೇಲೆ ಇಟ್ಟುಕೊಂಡು ಪಠ ನವನ್ನಾರಂಭಿಸಿದರು. ಅವರಿಗೆ ಸಂಸ್ಕೃತ ಜ್ಞಾನವಿದ್ದಿಲ್ಲ. ಆದರೂ

ದಿನಾಲು ಒಮ್ಮೆ ಹದಿನೆಂಟು ಅಧ್ಯಾಯಗಳನ್ನು ಓದಿ ಮುಗಿಸುತ್ತಿದ್ದರು. ಪಾರಾಯಣವು ಸಾಧಾರಣ ಅರ್ಧಕ್ಕೆ ಬಂದಾಗ ಗೋಪಾಲನು ದೇವರ ಮನೆಯ ಬಾಗಿಲಲ್ಲಿ ಬಂದುನಿಂತನು. ಕೂಡಲೇ ಅತ್ತ ಮಾಧವರಾಯರ ಮನಸ್ಸು ಹರಿಯಿತು. ಗೋಪಾಲನು ಅವರ ದುಡ್ಡಿಗೆ ಶನಿಯಾಗಿ ಹತ್ತಿದ್ದರಿಂದ ಅವನನ್ನು ಕಂಡಕೂಡಲೆ ಅವರ ಮನಸ್ಸು ವ್ಯಾಕುಲವಾಗುತ್ತಿತ್ತು. ಈಗಂತೂ ಗೋಪಾಲನು ಪೋಷಾಕು ಹಾಕಿಕೊಂಡು ಹೊರಗೆ ಹೊರಡುವ ತವಕದಿಂದಲೇ ಬಂದಿದ್ದನು. ಅವನು ಕೂಡಲೆ ಸ್ವಲ್ಪ ಬೇಸತ್ತವನಂತೆ « ಕಾಕಾ, ನಿಮ್ಮ ಆಹ್ನಿಕವು ಯಾವಾಗ ಮುಗಿಯಬೇಕು ? ನಾನಂತೂ ನಿಮ್ಮ ಹಾದೀ ನೋಡುತ್ತ ಹೊರಗೆ ಕೂತು ಒಂದು ತಾಸಾಯಿತು " ಎಂದು ಅಂದನು. "ಗೋಪಾಲಾ, ನಿನ್ನ ಸಂಗಡ ಮಾತಾಡಲಿಕ್ಕೆ ಈಗ ನನಗೆ ಎಳ್ಳಷ್ಟಾದರೂ ಅವಕಾಶವಿಲ್ಲ ನನ್ನ ಪಾರಾಯಣ ಮುಗಿದ ಮೇಲೆ ನೋಡೋಣ " ಎಂದು ಮಾಧವರಾಯರು ಸ್ವಲ್ಪ ಸಿಟ್ಟಿನಿಂದ ಗದ್ದರಿಸಿದರು.

ಗೋಪಾಲನು ಇಂಥ ಸಿಟ್ಟಿಗೆ ಎಂದೂ ಸೊಪ್ಪು ಹಾಕುವವನಲ್ಲ. ಅವನು ತಂದೆಗಿಂತ ಹೆಚ್ಚು ಹುಬ್ಬುಗಂಟುಹಾಕಿ ಗರ್ಜಿಸಿದನು: " ನಿಮಗೆ ಅವಕಾಶವೆಂದು ಸಿಗುತ್ತದೆ? ಯಾವಾಗ ನೋಡಿದರೂ ದೇವರ ಮನೆಯಲ್ಲಿಯೇ ಇರುತ್ತೀರಿ. ಈಗ ನಾಲ್ಕಾರು ದಿವಸಗಳಾದವು. ನಾನು ನಿಮಗೆ ರೂಪಾಯಿ ಕೇಳುತ್ತಿದ್ದು. ಇನ್ನೂ ತಡೆ, ತಡೆ, ಎಂದರೆ ನನ್ನ ಕೈಯಿಂದಾಗದ ಮಾತು ನನಗೆ ಐವತ್ತು ರೂಪಾಯಿ ಕೊಟ್ಟು ನೀವು ಎರಡನೇ ಕೆಲಸ ಮಾಡಬಹುದು'' ಮಾಧವರಾಯರು ಬಹಳ ಸಂತಾಪದಿಂದ - " ಸಾಕು ಮಾಡು. ನಿನಗೆ ರೂಪಾಯಿ ಬೇಡುವದರ ಹೊರ್ತು ಎರಡನೇ ಮಾತೇ ಇಲ್ಲ. ಕೂತರೆ ರೂಪಾಯಿ ನಿಂತರೆ ರೂಪಾಯಿ. ನಿನಗೆ ಇಷ್ಟು ರೂಪಾಯಿಗಳಾದರೂ ಯಾತಕ್ಕೆ ಬೇಕು ! ಮತ್ತೆ ಗೆಳೆಯರಿಗೆ ಪಾರ್ಟಿ, ಸಿನೇಮಾ, ನಾಟಕ ಇದೇ ಅಲ್ಲವೇ ನಿನ್ನ ಉದ್ಯೋಗ! " ಎಂದು ಗುಡುಗು ಹಾಕಿದರು.

" ಕಾಕಾ, ತಾರುಣ್ಯದಲ್ಲಿ ಅಲ್ಲದೆ ಯಾವಾಗ ನಾನು ಸುಖಬಡುವದು? ಈ ತಾರುಣ್ಯ ಹೊರಟು ಹೋಗಿ ನಿಮ್ಮಂತೆ ಹಣ್ಣಾದ ಮೇಲೆ

ಆ ದುಡ್ಡು ತಕ್ಕೊಂಡು ಏನು ಸುಡಬೇಕು? ನೀವು ತಾರುಣ್ಯದಲ್ಲಿ ಮಾಡಿದ್ದನ್ನು ಸ್ವಲ್ಪ ನೆನಪಿಗೆ ತರಬಾರದೇನು?" ಎಂದು ಗೋಪಾಲನು ಮೃದು ಶಬ್ದಗಳಿಂದಲೇ ಒಳ ಹೊಡೆತಕೊಟ್ಟನು. 'ಮೂರ್ಖ, ನಾವು ಪ್ರಾಯದಲ್ಲಿ ನಿನ್ನ ಹಾಗೆ ಪರರು ಗಳಿಸಿದ ದುಡ್ಡಿನ ಮೇಲೆ ಚಲ್ಲಾಟ ಮಾಡಲಿಲ್ಲ. ದುಡಿದು ಬೇಕಾದಷ್ಟು ಗಳಿಸಿ ಸುಖಬಡುತ್ತಿದ್ದೆವು' ಎಂದು ಮಾಧವರಾಯರು ಅವನಿಗೆ ನಾಚಿಕೆ ಹುಟ್ಟಬೇಕೆಂದು ನುಡಿದರು. "ಓಹೋ, ನೀವು ಯಾವ ಪ್ರಕಾರ ಇಷ್ಟೆಲ್ಲ ದುಡ್ಡು ಗಳಿಸಿದಿರೆಂಬ ಬಗ್ಗೆ ನನ್ನ ಮುಂದೆ ಜಂಬ ಕೊಚ್ಚಬೇಡಿರಿ. ಅದೆಲ್ಲಾ ನನಗೆ ಗೊತ್ತಿದೆ. ಇನ್ನು ಈ ದುಡ್ಡನ್ನಾದರೂ ನೀವು ಯಾರ ದೆಸೆಯಿಂದ ಕಾದಿಡುವದು? ನನ್ನಗೋಸ್ಕರವೇ ಅಲ್ಲವೇ? ಹಾಗಾದರೆ ನನಗೆ ಬೇಕಾದ ಸಮಯದಲ್ಲಿ ನೀವು ದುಡ್ಡನ್ನು ಯಾಕೆ ಕೊಡಬಾರದು?"

ಮಾಧವರಾಯರು ಇಷ್ಟು ದಿವಸ ತಮ್ಮ ದತ್ತಕಮಗನ ಮೇಲೆ ಬಹಳ ಪ್ರೀತಿ ವಾತ್ಸಲ್ಯಗಳನ್ನು ತೋರಿಸಿ ಬೆಳೆಯಿಸಿದ್ದಕ್ಕೆ ಚನ್ನಾಗಿ ಪ್ರಾಯಶ್ಚಿತ್ತವಾಗುತ್ತಿದೆಯೆಂದು ಮನಸ್ಸಿನಲ್ಲಿ ತಳಮಳಗೊಂಡರು. ಆ ಮೇಲೆ ಸಿಟ್ಟಿನಿಂದ "ಛೀ, ವ್ರಾತ್ಯಾ, ಹೊರಟು ಹೋಗು. ನೀನು ಮುಪ್ಪಿನ ಕಾಲದಲ್ಲಿ ಹೊಲಮನೆಯ ಕೆಲಸದಲ್ಲಿ ನೆರವಾಗುವದನ್ನು ಬಿಟ್ಟು ನನ್ನ ದುಡ್ಡನ್ನು ದಿನಾದಿನಾ ಹಾಳು ಮಾಡಬೇಕೆನ್ನುವಿ. ನೀನು ಕೇಳಿದಂತೆ ದುಡ್ಡು ಕೊಡುತ್ತ ಹೋದರೆ ಎಷ್ಟು ಹಣವಾದರೂ ಸಾಲಲಿಕ್ಕಿಲ್ಲ. ಹೊರಟು ಹೋಗು. ನಿನಗೆ ನಾನು ಒಂದು ಪೈಯನ್ನು ಸಹ ಕೊಡುವದಿಲ್ಲ" ಎಂದು ಪ್ರಸ್ತಾಪವನ್ನು ಮುಗಿಸಲು ಮಾಧವರಾಯರು ಹವಣಿಸಿದರು.

ಆ ಮೇಲೆ ಗೋಪಾಲನು - "ನೀವು ನನಗೆ ದುಡ್ಡು ಕೊಡದಿದ್ದರೆ ನಾನು ಸಾಲ ತೆಗೆಯುವದೇ ನಿಶ್ಚಯ. ನೀವು ನನಗೆ ದತ್ತಕ ತೆಗೆದುಕೊಂಡ ಮೇಲೆ ನಿಮ್ಮ ಆಸ್ತಿಗೆ ನನ್ನ ಹೊರ್ತು ಉತ್ತರಾಧಿಕಾರಿಯಾದರೂ ಯಾರಿದ್ದಾರೆ!" ಎಂದು ಬೆದರಿಕೆ ಹಾಕಿದನು.

ಮಾಧವರಾಯರು ಬಹಳ ರೇಗಿಗೆದ್ದು - "ಒಳ್ಳೇದು ನೋಡೋಣ. ಯಾರು ತಾನೇ ನಿನಗೆ ಸಾಲ ಕೊಡುವ ಸಾಹಸ ಮಾಡುವರೋ! ನಾನಂತೂ ಈ ಹೊತ್ತೇ ವರ್ತಮಾನಪತ್ರಗಳಲ್ಲಿ ನಿನಗೆ ಯಾರೂ ಸಾಲ

ಕೊಡಬಾರದೆಂದು ನೋಟೀಸು ಕೊಟ್ಟುಬಿಡುತ್ತೇನೆ. ಇಷ್ಟಾದ ಮೇಲೆ ನಿನಗೆ ಹೇಗೆ ದುಡ್ಡು ಹುಟ್ಟುತ್ತದೋ ನೋಡೋಣ" ಎಂದು ಪ್ರತಿಭಟಿಸಿದರು.

ತನ್ನ ಎಲ್ಲ ಯುಕ್ತಿವಾದಗಳು ವ್ಯರ್ಥವಾದದ್ದು ನೋಡಿ ಗೋಪಾಲನು ಕಡೆಗೆ ಒಂದು ರಾಮಬಾಣ ಉಪಾಯವನ್ನು ಪ್ರಯೋಗಿಸಿದನು. ಅವನು ಅಂದದ್ದು-"ಕಾಕಾ, ಇವೆಲ್ಲಾ ಬೆದರಿಕೆಗಳನ್ನು ನನಗೆ ಹಾಕಬೇಡಿರಿ. ನೀವು ನನ್ನ ವಿರುದ್ಧವಾಗಿ ನೋಟೀಸು ಕೊಡುವ ಪೂರ್ವದಲ್ಲಿಯೇ ನಾನು ಮುಂದೆ ಹೋಗಿ ಸುಂದರಾಬಾಯಿಗೂ ನಿಮಗೂ ನಡೆವ ವ್ಯವಹಾರಗಳನ್ನು ಊರೊಳಗೆಲ್ಲ ಹರಡಿ ಬಿಡುತ್ತೇನೆ. ಆ ಮೇಲೆ 'ದೇವರು ಬ್ರಾಹ್ಮಣರಲ್ಲಿ ವಿಶ್ವಾಸವುಳ್ಳವ" "ಧರ್ಮಿಷ್ಠ" ಎಂಬ ನಿಮ್ಮ ಕೀರ್ತಿಯು ಊರಲ್ಲಿ ಉಳಿಯುತ್ತದೋ ನೋಡಿ ಬಿಡುತ್ತೇನೆ"

ಸುಂದರಾಬಾಯಿಯ ವ್ಯವಹಾರದ ಹೆಸರು ತೆಗೆದ ಕೂಡಲೆ ಮಾಧವರಾಯರು ಭೀತಿಯಿಂದ ತಣ್ಣಗಾದರು. ಅವರ ಬಾಯಿಂದ ಮಾತೇ ಹೊರಡಲಿಲ್ಲ. ಸುಂದರಾಬಾಯಿಯ ಕೂಡ ತಾವು ಮಾಡಿದ ಗುಪ್ತ ಕಾರಸ್ಥಾನವು ಇವನಿಗೆ ಹೇಗೆ ಗೊತ್ತಾಯಿತು ? ಇವನೊಬ್ಬನಿಗೇ ತಿಳಿದದೆಯೋ ಅಥವಾ ಈ ಅವಿವೇಕಿಯು ತನ್ನ ಸ್ನೇಹಿತರಲ್ಲಿ ಆಡಿ ಬಿಟ್ಟಿದ್ದಾನೋ? ಇವೇ ಮೊದಲಾದ ವಿಚಾರ ತರಂಗಗಳು ಮಾಧವರಾಯರ ಮನಸ್ಸಿನಲ್ಲಿ ಹೊಯ್ದಾಡಹತ್ತಿದವು. ಆ ಮೇಲೆ ಏನೂ ವಾಗ್ವಾದ ನಡೆಸದೆ ಚಟಕ್ಕನೇ ಎದ್ದು ಅಟ್ಟದ ಮೇಲೆ ಹೋದರು. ಗೋಪಾಲನು ಹಿಂದಿನಿಂದ ನಡೆದನು. ಆ ಮೇಲೆ ಮಾಧವರಾಯರು ತಿಜೋರಿಯನ್ನು ತೆಗೆದು ಒಂದುನೂರು ರೂಪಾಯಿಯ ನೋಟು ತೆಗೆದು ಗೋಪಾಲನ ಕಡೆಗೆ ಚಲ್ಲಿದರು. ಆ ನೋಟು ತಕ್ಕೊಂಡು ಗೋಪಾಲನು ಹಿಗ್ಗುತ್ತ ತಂದೆಯ ಕಡೆಗೆ ನೋಡಿ ಅವರ ಮೋರೆಯ ಮೇಲೆ ಚಿಂತೆಯ ಕತ್ತಲೆಗವಿದದ್ದನ್ನು ಕಂಡು ಮೆಲ್ಲನೇ ಅಂದದ್ದು - "ಕಾಕಾ, ಸುಂದರಾಬಾಯಿಯ ವೃತ್ತಾಂತವು ನನಗೆ ಮಾತ್ರ ಒಂದು ಪ್ರಸಂಗದಿಂದ ತಿಳಿಯಿತು. ಆದರೆ ನಾನೇನೂ ಅದನ್ನು ನನ್ನ ಜೀವದ ಗೆಳೆಯರಿಗೆ ಸಹ ಹೇಳಿಲ್ಲ. ಹಾಗೂ ಕಾರಣವಿಲ್ಲದೆ ನಾನೇನೂ ಅದನ್ನು

ಬೈಲಿಗೆ ಎಳೆಯುವದಿಲ್ಲ. ನೀವು ಚಿಂತೆ ಮಾಡುವ ಕಾರಣವಿಲ್ಲ” ಎಂದು ಹೇಳಿದವನೇ ಓಡುತ್ತ ಅಟ್ಟದ ಪಾವಟಿಗೆಗಳನ್ನು ಇಳಿದು ಹೊರಟು ಹೋದನು.

ಗೋಪಾಲನು ಹೊರಟು ಹೋದ ಮೇಲೆ ಮಾಧವರಾಯರು ತಿಜೋರಿಯು ಹಾಗೇ ತೆರೆದಿರಲಿಕ್ಕೆ ಗೋಪಾಲನು ಹೋದ ಮಾರ್ಗದ ಕಡೆಗೆ ಒಂದೇ ಸವನೇ ದೃಷ್ಟಿಯಿಟ್ಟು ನಿಂತುಕೊಂಡರು. ಅವರ ಮನಸ್ಸು ಅನೇಕ ವಿಚಾರ ಪರಂಪರೆಗಳ ಕೈಯಲ್ಲಿ ಸಿಕ್ಕು ಮುಂದೇನು ಮಾಡಬೇಕೆಂಬದು ತೋಚದೆ ಒದ್ದಾಡುತ್ತಿತ್ತು. ಕಡೆಗೆ ಗೋಪಾಲನು ಕೊಟ್ಟ ಆಶ್ವಾಸನದಿಂದ ಕೊಂಚ ಸಮಾಧಾನವುಂಟಾಯಿತು. ಅವರು ಕೂಡಲೇ ಕೆಳಗಿಳಿದು ಬಂದು ದೇವರ ಮನೆಯನ್ನು ಸೇರಿ ಮೊದಲಿನಂತೆ ಪಾರಾಯಣಕ್ಕೆ ಕುಳಿತರು. ಅನಂತರ ಜಪಗಳನ್ನು ಮುಗಿಸಿದರು. ನಿತ್ಯದಂತೆ ಹೊಲಕ್ಕೂ ಹೋದರು. ದಿನದ ಎಲ್ಲ ಕೆಲಸಗಳನ್ನೂ ಕ್ರಮದಿಂದ ಮಾಡಿದರು. ಆದರೆ ದಿನದ ಎಲ್ಲ ವ್ಯಾಪಾರಗಳು ಯಂತ್ರವು ನಡೆಸಿದಂತೆ ನಡೆದಿದ್ದವು. ಅವರ ಮನಸ್ಸು ಆ ಆ ಕಾರ್ಯ ಕಲಾಪಗಳಲ್ಲಿರದೆ ಏನೇನೋ ಚಿಂತಿಸುತ್ತ ದೂರದೂರಿನೆಡೆಗಳಲ್ಲಿ ದೂರದೂರಿನ ಕಾಲಗಳಲ್ಲಿ ಅಲೆದಾಡುತ್ತಿತ್ತು.

---

೨.

## ಮಾಡಿದ್ದೊಂದು ಆದದ್ದೊಂದು.

ಮಾಧವರಾಯರಿಗೂ ಗೋಪಾಲನಿಗೂ ಮಾತಿನ ಯುದ್ಧವು ನಡೆದಾಗ ನರ್ಮದೆಯು ಅದೇ ಎರೆದುಕೊಂಡು ತಲೆ ಒರಿಸಿಕೊಳ್ಳುತ್ತ ನಡುಮನೆಯ ಕೋಣೆಯೊಳಗೆ ಕೂತಿದ್ದಳು. ಈ ಕೋಣೆಯು ದೇವರ ಕೋಣೆಗೆ ಹೊಂದಿ ಇತ್ತು. ಆದ್ದರಿಂದ ಪಿತಾಪುತ್ರರ ಎಲ್ಲ ಮಾತು ಗಳು ಆಕೆಯ ಕಿವಿಗೆ ಬಿದ್ದವು. ನರ್ಮದೆಯು ಬಹಳ ಸರಳ ಮತ್ತು ಸೌಮ್ಯಸ್ವಭಾವದವಳು. ಎರಡನೆಯವರ ಗುಪ್ತಭಾಷಣವನ್ನು ಅವಳು ಎಂದೂ ಕೇಳಿದವಳಲ್ಲ. ಈ ಹೊತ್ತು ಅಕಸ್ಮಾತ್ತಾಗಿ ತನ್ನ ತಂದೆಗೂ ಸುಂದರಾಬಾಯಿಗೂ ನಡೆದ ವ್ಯವಹಾರದ ಉಲ್ಲೇಖವನ್ನು ಕೇಳಿದೊಡನೆ ಆಕೆಯ ಎದೆ ಝಲ್ಲೆಂದಿತು. ತಂದೆಯ ಅನೇಕ ವ್ಯವಹಾರಗಳು ಸಂಶಯಾಸ್ಪದವಾಗಿದ್ದದ್ದು ಆಕೆಗೆ ಗೊತ್ತಿತ್ತು. ತಂದೆಯು ಕೆಲಸದಲ್ಲಿದ್ದಾಗ ಅನೇಕ ಜನರಿಂದ ಲಂಚತಿಂದು ಬಡ ಜನರಿಗೆ ಅನ್ಯಾಯಮಾಡಿ, ಶ್ರೀಮಂತರಾದ ಪಕ್ಷಗಾರರಿಂದ ದುಡ್ಡು ಸೆಳೆದುಕೊಂಡು, ಶ್ರೀಮಂತನಾದದ್ದು ಅವಳ ಕಿವಿಯ ತನಕ ಬಂದಿತ್ತು. ಯಾಕಂದರೆ ಮಾಧವರಾಯರು ತಮ್ಮ ಸ್ನೇಹಿತರೊಂದಿಗೆ ಮಾತನಾ ಡುತ್ತ ಕುಳಿತಾಗ –"ಇದು ನೋಡಿರಿ, ಈ ಪ್ರಪಂಚದಲ್ಲಿ ದುಡ್ಡು ಬೇಕಾದರೆ ಅನೇಕ ಕುಟಿಲೋಪಾಯಗಳನ್ನು ಮಾಡಬೇಕಾಗುತ್ತದೆ. ವ್ಯವಹಾರವೆಂದಮೇಲೆ ಸುಳ್ಳು - ತಗಲು - ಕಪಟ ಇವು ನಡೆಯಲಿಕ್ಕೇ ಬೇಕು. ಇಲ್ಲದಿದ್ದರೆ ಯಾರೂ ಶ್ರೀಮಂತರಾಗಲಾರರು. ಆದರೆ ಇದ ನ್ನೆಲ್ಲ ಮಾಡಿ ದಕ್ಕಿಸಿಕೊಳ್ಳಲಿಕ್ಕೆ ಮಾತ್ರ ಪ್ರಚಂಡ ಬುದ್ಧಿಮತ್ತೆಯು ಬೇಕಾಗುತ್ತದೆ. ಧೈರ್ಯವು ಬೇಕಾಗುತ್ತದೆ. ನ್ಯಾಯಾನ್ಯಾಯಗಳ ವಿಚಾರಮಾಡುತ್ತಿರುವವನಿಗೆ ಈ ಜಗತ್ತಿನಲ್ಲಿ ದುಡ್ಡು ಸಿಗಲಾರದು', ಎಂದು ಮೊದಲಾಗಿ ಹೇಳುತ್ತಿದ್ದುದನ್ನು ನರ್ಮದೆಯು ಅನೇಕ ಸಲ ಕೇಳಿದ್ದಳು. ಆದರೆ ತನ್ನ ತಂದೆಯು ಏಕಪತ್ನೀವ್ರತವಲ್ಲಿಯೂ

ಶಿಥಿಲನಾಗಿದ್ದದ್ದು ಅವಳಿಗೆ ಗೊತ್ತಿದ್ದಿಲ್ಲ. ತನ್ನ ತಂದೆಯು ನಿರುತ್ತರನಾಗಿ ಕೂಡಲೇ ಅಟ್ಟದಮೇಲೆ ಹೋಗಿ ದುಡ್ಡು ಕೊಟ್ಟದ್ದು— ಗೋಪಾಲನು ಆನಂದದಿಂದ ಜಿಗಿದಾಡುತ್ತ ಹೊರಬಿದ್ದದ್ದು - ತಂದೆಯು ಏನೋ ಚಿಂತಿಸುತ್ತಿರುವಂತೆ ವರ್ತಿಸಿದ್ದು - ಇವೆಲ್ಲಾ ನೋಡಿ ಇದೇನೋ ಬಹಳ ಪಾಪದ ಕಾರಸ್ಥಾನವೆಂದು ಅವಳಿಗೆ ಹೊಳೆಯಿತು. ಆಮೇಲೆ ಅವಳಿಗೆ ತನ್ನ ನಿಷ್ಪಾಪಳಾದ, ಸಾತ್ವಿಕಳಾದ ತಾಯಿಯ ಶುದ್ಧಜೀವನವು ನೆನಪಾಗಿ ಅವಳ ಕಣ್ಣೊಳಗಿಂದ ಎರಡು ಹನಿ ನೀರು ತಟಗಿದವು. ಅಷ್ಟರಲ್ಲಿಯೇ ಅವಳ ಅಕ್ಕ ರಂಗೂಬಾಯಿಯು ತನ್ನನ್ನು ಒದರಿದ್ದನ್ನು ಕೇಳಿ ಅವಳು ಲಗುಬಗೆಯಿಂದ ಕುಂಕುಮವನ್ನು ಹಚ್ಚಿಕೊಂಡು ಅಡಿಗೆಯ ಮನೆಯೊಳಗೆ ಹೋದಳು.

ನರ್ಮದೆಯ ಮೇಲೆ ರಂಗೂಬಾಯಿಗೆ ಸ್ವಲ್ಪ ಸಿಟ್ಟು ಬಂದಿತು. ಎರಡು ಮೂರುಸಾರೆ ಒದರಿದರೂ ವಿಚಾರಮಗ್ನಳಾದ ಅವಳಿಗೆ ಕೇಳಿಸಿದ್ದಿಲ್ಲ. ಇದಲ್ಲದೆ ಅವಳು ಒಳಗೆ ಹೋದವಳೇ ಮಡಿನೀರಿನ ಕೊಡದ ಹತ್ತರ ಇರುವ ಈಳಿಗೆಯನ್ನು ಪಲ್ಲೆ ಹೆಚ್ಚಲಿಕ್ಕೆ ಎಳೆದುಕೊಂಡಳು. ಕೂಡಲೇ ರಂಗೂಬಾಯಿಯು – " ಇದೇನೆ, ನಮ್ಮವ್ವಾ? ಮಡಿನೀರು ಮುಟ್ಟೀ! ದೂರ ಸರಿ. ನೀನು ಇಷ್ಟು ದೊಡ್ಡವಳಾದರೂ ನಿನಗೆ ಮಡಿ ಮೈಲಿಗೆಯ ಕಲ್ಪನೆಯೇ ಇಲ್ಲವಲ್ಲ '' ಎಂದು ಗದ್ದರಿಸಿದಳು. "ಅಕ್ಕಾ, ನನಗೆ ಮಡಿಯ ಕೊಡವು ಕಾಣಿಸಲಿಲ್ಲ. ದೂರ ಸರಿಯುತ್ತೇನವ್ವಾ" ಎಂದು ನರ್ಮದೆಯು ಅನ್ನುತ್ತಾ ಈಳಿಗೆಯನ್ನು ತಕ್ಕೊಂಡು ದೂರ ಹೋಗಿ ಪಲ್ಲೆಹೆಚ್ಚುತ್ತ ಕುಳಿತಳು. ಮಾಧವರಾಯರ ಅಡಿಗೆಮನೆಗೆ ಕಿಡಿಕೆಗಳೇ ಇದ್ದಿಲ್ಲ. ಮೇಲೆ ಒಂದು ಬೆಳಕಿಂಡಿಯು ಮಾತ್ರ ಇತ್ತು. ಆದರಿಂದ ಒಳಗಿನ ಪದಾರ್ಥಗಳು ಕಾಣಿಸುತ್ತಿರಲಿಲ್ಲ. ಇಡೀ ಮನೆಯೇ ಹಳೆಯ ಪದ್ಧತಿಯದು. ಅದರಲ್ಲಿ ಅಡಿಗೆಮನೆ - ಬಚ್ಚಲಮನೆಗಳಲ್ಲಿ ಬೆಳಕು ತೀರ ಕಡಿಮೆ. ಗೋಡೆಗಳ ಮೇಲೆ ಜೇಡಹುಳಗಳ ಜಾಳಿಗೆಗಳು ತುಂಬಾ ಬೆಳೆದಿದ್ದವು. ಅಡಿಗೇ ಒಲೆಯ ಹೊಗೆಯು ಮೇಲಕ್ಕೆ ಸುತ್ತಿಸುತ್ತಿ ಹೊರಗೆ ಹೋಗಲಿಕ್ಕೆ ಮಾರ್ಗಗಾಣದೆ ಗೋಡೆಗಳನ್ನೆಲ್ಲ ಕಪ್ಪು ಮಾಡಿತ್ತು. ಮೇಲಾಗಿ ರಂಗೂಬಾಯಿಯ ಮಡಿಗಂತೂ ತಾಳವೇ ಇದ್ದಿಲ್ಲ. ಮೈತೊಳ

ಕೊಂಡು ಬಚ್ಚಲದಿಂದ ಒಳಗೆ ಬರುವಾಗ ಅವಳು ಅಲ್ಲಲ್ಲಿಗೆ ಜಿಗಿಯುತ್ತ ಬರುತ್ತಿದ್ದಳು. ಯಾಕಂದರೆ ಎಲ್ಲಿಯಾದರೂ ನೂಲು ತುಳಿಯುವೆನೆಂಬ ಭಯವು ಅವಳಿಗೆ ತುಂಬಾ ಇತ್ತು. ನೂಲಿಗೆ ಅವಳು ಇಷ್ಟು ಅಂಜಿದರೂ ಅಡಿಗೆಯ ಪದಾರ್ಥಗಳಲ್ಲಿ ಕೂದಲು, ಕಡ್ಡಿ, ಇದ್ದಲಿಯ ಚೂರು ಮುಂತಾದವು ಬಂದರೆ ಅವಳಿಗೆ ಏನೂ ಅನಿಸುತ್ತಿದ್ದಿಲ್ಲ.

ನರ್ಮದೆಯು ಮಡಿಮೈಲಿಗೆಯ ಬಗ್ಗೆ ಸಿಟ್ಟು ಮಾಡಲಿಕ್ಕೆ ಇನ್ನೊಂದು ಕಾರಣವಿತ್ತು. ನರ್ಮದೆಯು ಮಡಿನೀರಿನಿಂದ ಮೈತೊಳಕೊಂಡು ಬಂದರೂ ಅವಳನ್ನು ರಂಗೂಬಾಯಿಯವರು ಅಡಿಗೆಯಲ್ಲಿ ಬರಗೊಡುತ್ತಿದ್ದಿಲ್ಲ. ಯಾಕಂದರೆ ನರ್ಮದೆಯು ಇನ್ನೂ ಒಂದಾದರೂ ಹಡೆದಿದ್ದಿಲ್ಲ. ತನಗಾದರೂ ಮಕ್ಕಳಾಗಿದ್ದರೋ? ಹೌದು, ಒಂದು ಕೂಸು ಹುಟ್ಟಿ ಅದು ಸತ್ತು ಹೋಗಿತ್ತು. ಆದ್ದರಿಂದ ತಮ್ಮ ಮಡಿಯು ನರ್ಮದೆಯ ಮಡಿಗಿಂತ ಶ್ರೇಷ್ಠವಾದದ್ದೆಂದು ಅವರ ಮತವು.

ಮಡಿಮೈಲಿಗೆಗಳ ಕಲ್ಪನೆಗಳು ಸಾಂಪ್ರತಕಾಲದಲ್ಲಿ ಹೀಗೆ ಹುಚ್ಚುತನದ ಸ್ವರೂಪಗಳನ್ನು ಹೊಂದಿವೆ. ಮಡಿ ಅಂದರೆ ದೇಹದಿಂದಲೂ, ಉಡಿಗೆ ತೊಡಿಗೆಯಿಂದಲೂ ಮನಸ್ಸಿನಿಂದಲೂ ಸ್ವಚ್ಛವಾಗಿರುವದೆಂಬದನ್ನು ನಮ್ಮ ಜನರು-ವಿಶೇಷತಃ ಹೆಂಗಸರು- ಮರೆತುಬಿಟ್ಟಿದ್ದಾರೆ. ಹೊಲಸಾದ ವಸ್ತ್ರವಾಗಲಿ ಪದಾರ್ಥವಾಗಲಿ ಮಡಿಯಾಗಲಾರದೆಂದು ಅವರಿಗೆ ಹೊಳೆಯುವದೇ ಇಲ್ಲ. ಇಷ್ಟೇ ಅಲ್ಲ, ಮಡಿಯೆಂದು ತಿಳಿಯಲ್ಪಡುವ ವಸ್ತ್ರಗಳು ಬಹುತರವಾಗಿ ಹೊಲಸಾಗಿಯೂ ಕಮಟಾಗಿಯೂ ಇರುವದರಿಂದ ಮಡಿಗೂ ಹೊಲಸಿಗೂ ಇರುವ ಪರಸ್ಪರ ವಿರೋಧವು ಇಲ್ಲದಂತಾಗಿದೆ.

ನರ್ಮದೆಯು ಪಲ್ಲೆ ಹೆಚ್ಚುತ್ತ ಕುಳಿತಾಗ ರಂಗೂಬಾಯಿಯು ಕೈಯ್ಯಲ್ಲಿ ಜಪಮಾಲೆಯನ್ನು ಹಿಡಿದು ಜಪಮಾಡುತ್ತಿದ್ದಳು. ಆದರೆ ಅವಳಿಗೆ ತನ್ನ ತಂದೆಗೂ ಉದ್ಧಟ ತಮ್ಮನಾದ ಗೋಪಾಲನಿಗೂ ಏನೇನೋ ಸಂವಾದವಾಯಿತೆಂಬದನ್ನು ಕೇಳಲು ಬಹಳ ಕುತೂಹಲವಾಗಿತ್ತು. ಮೇಲಿಂದ ಮೇಲೆ ಬಂದು ಬಂದು ದುಡ್ಡಿನದೆಸೆಯಿಂದ

ಪೀಡಿಸುತ್ತಾನೆಂಬದು ಅವಳಿಗೆ ಗೊತ್ತಿತ್ತು. ಆದರೆ ಅವರಿಬ್ಬರ ಸಂವಾದಕ್ಕೆ ಆಕೆಯು ಲಕ್ಷ್ಯಗೊಟ್ಟಿದ್ದರೂ ಅದು ಸ್ಪಷ್ಟವಾಗಿ ಕೇಳಿಸಿದ್ದಿಲ್ಲ. ಆದ್ದರಿಂದ ಅವಳು ನರ್ಮದೆಯನ್ನು ಪೀಡಿಸಿ ಪೀಡಿಸಿ ಕೇಳತೊಡಗಿದಳು.

"ನರ್ಮದಾ, ಅಪ್ಪನು ಗೋಪಾಲನಿಗೆ ರೂಪಾಯಿ ಕೊಡಲೊಪ್ಪಿದನೇನು?"

"ಅಕ್ಕಾ, ಒಪ್ಪದಿದ್ದರೆ ಹೇಗೆ? ಎದ್ದು ಅಟ್ಟದ ಮೇಲೆ ಹೋಗಿ ರೂಪಾಯಿ ಕೊಟ್ಟು ಕೆಳಗೆ ಬಂದನು"

"ಗೀತಾ ಪಾರಾಯಣವನ್ನು ಬಿಟ್ಟು ಅಟ್ಟದ ಮೇಲೆ ಹೋದನೇ? ತಾನೇ ತಿಜೋರೀ ತೆರೆದನೇ?"

"ಹೌದು ಹೌದು. ಗೋಪಾಲನ ಕೈಯಲ್ಲಿ ಹೇಗೆ ಕೀಲೀಕೈಕೊಡುವದು? ರೂಪಾಯಿ ಕೊಡದಿದ್ದರೆ ಬೇರೆ ಅವನು ಬಿಡುವನೇ?"

"ನರ್ಮದಾ, ಈ ದತ್ತಕ ಮಗನಿಂದ ಅಪ್ಪನಿಗೆ ಎಷ್ಟೇಷ್ಟು ಸುಖವಿಲ್ಲ. ಅನ್ನಗಾಣದ ಈ ಪೋಲಿಗೆ ಮನೆಯಲ್ಲಿಟ್ಟುಕೊಂಡು ಮಗನನ್ನಾಗಿ ಮಾಡಿ ಸುಖದಿಂದ ಬೆಳೆಯಿಸಿದರೆ ಈಗ ಅಪ್ಪನ ದುಡ್ಡನ್ನೆಲ್ಲ ಗೊತ್ತಿಗೆ ಹಚ್ಚಲಿಕ್ಕೆ ಕೂತಿದ್ದಾನೆ. ಅಪ್ಪನು ಹೋದ ಮೇಲೆ ಇವನು ನಮಗೆ ಭಿಕ್ಷಾಪಾತ್ರೆ ಕೊಡುವದೇ ನಿಶ್ಚಯ.

"ರಂಗಕ್ಕಾ, ಹೋಗಲಿ ಬಿಡು. ನೀನು ಯಾಕೆ ಚಿಂತೆ ಮಾಡಿ ಸೊರಗುವಿ? ಹೆಂಗಳೆಯರಾದ ನಮಗೆ ಈ ಆಸ್ತಿಯಿಂದೇನು? ಅಪ್ಪನ ಪಶ್ಚಾತ್ ಹೇಗಾದರೂ ಈ ಆಸ್ತಿಯು ನಮ್ಮ ಉಳಿದ ದಾಯಾದರಿಗೆ ಹೋಗುತ್ತಿತ್ತೇ ಹೊರತು ನಮಗೇನೂ ಅದು ಸಿಗುತ್ತಿರಲಿಲ್ಲ. ಈಗ ಅದೆಲ್ಲ ಎಂದಾದರೂ ಒಂದು ದಿನ ಈ ದತ್ತಕ ಮಗನಿಗೇ ಹೋಗುವದಾದ ಮೇಲೆ ನಾವೇಕೆ ಈ ದುಡ್ಡಿಗಾಗಿ ಸೊರಗಿ ಸಾಯಬೇಕು? ಹುಟ್ಟಿಸಿದ ದೇವರು ಹುಲ್ಲು ಮೇಯಿಸುವನೇ?'

"ತಂಗೀ, ಇದೆಲ್ಲ ಶಾಸ್ತ್ರಹೇಳಲಿಕ್ಕೆ ಬಲುಚಂದ. ಈ ಪ್ರಕಾರ ಗೋಪಾಲನು ದುಡ್ಡನ್ನು ನೀರಿನಂತೆ ವೆಚ್ಚ ಮಾಡಹತ್ತಿದರೆ ಎಷ್ಟು

ದುಡ್ಡಾದರೂ ಸಾಲದು. ಮುಂದೆ ನಮ್ಮ ಅವಸ್ಥೆ ಏನು ಎಂಬದರ ವಿಚಾರವೇ ನಿನಗೆ ಹೊಳೆಯುವದಿಲ್ಲವಲ್ಲ ? ''

''ಅಕ್ಕಾ, ಇದೆಲ್ಲ ಅನುಭವಿಕನಾದ ನಮ್ಮ ಅಪ್ಪನಿಗೆ ತಿಳಿಯಬಾರದಿತ್ತೇನು?

"ನರ್ಮದಾ, ಅದು ಧರ್ಮಶಾಸ್ತ್ರದ ವಿಷಯ. ಅವ್ವನು ಮರಣೋನ್ಮುಖಳಾಗಿ ಹಾಸಿಗೆಯ ಮೇಲೆ ಬಿದ್ದುಕೊಂಡಿರುವಾಗ ರಾಮು ಭಟ್ಟರು ಬಂದು, "ಅಮ್ಮಾ, ನಿಮಗೆ ಸದ್ಗತಿಯಾಗಬೇಕಾದರೆ ನಿಮಗೆ ತಿಲೋದಕ ಪಿಂಡೋದಕಗಳನ್ನು ಕೊಡಲಿಕ್ಕೆ ಮಗನು ಬೇಕು. ಹೊಟ್ಟೆಯ ಮಗನಿಲ್ಲದಿದ್ದರೂ ದತ್ತಕವಾದರೂ ತೆಗೆದುಕೊಳ್ಳಬೇಕು. ಇಲ್ಲದಿದ್ದರೆ ನಿಮ್ಮ ಪಿತೃಗಳು ದುರ್ಗತಿಯನ್ನು ಹೊಂದುವರು" ಎಂದು ಹೇಳಲು ಅವ್ವನು ದತ್ತಕ ತೆಗೆದುಕೊಳ್ಳುವ ಹಟ ಹಿಡಿದಳು. ಅಪ್ಪನ ಮನಸ್ಸಿನಲ್ಲಿ ದತ್ತಕ ವಿಚಾರವಿಲ್ಲದಿದ್ದರೂ ಧರ್ಮಶಾಸ್ತ್ರವಿಧಿಯನ್ನು ಮೀರಬಾರದೆಂದು ರಾಮುಭಟ್ಟರು ಹೇಳಿದ್ದರಿಂದ ಅವನು ಒಪ್ಪಲೇಬೇಕಾಯಿತು. ಈ ಪ್ರಕಾರ ಅಪ್ಪನು ಮಾಡಿದ್ದೊಂದು. ಆದದ್ದು ಮತ್ತೊಂದು. ಹೀಗಾಗಿ ಹೋಗಿದೆ'' ''ಅಕ್ಕಾ, ಧರ್ಮಶಾಸ್ತ್ರದ ವಿಧಿಯನ್ನು ನಾವು ಶಿರಸಾ ವಹಿಸಲಿಕ್ಕೇ ಬೇಕು. ಇನ್ನು ನಮಗೆ ಭಿಕ್ಷಾಪಾತ್ರೆಯು ಬರುವದಿದ್ದರೆ ನಮ್ಮ ಹಣೇಬರಹವನ್ನು ತಪ್ಪಿಸುವರಾರು?" "ನರ್ಮದೆ, ನೀನು ಹೇಳುವದು ಸರಿಯಾಗಿದ್ದರೂ ನಾನಂತೂ ಅಪ್ಪನು ಮಾಡಿಟ್ಟ ದುಡ್ಡು ಗೋಪಾಲನ ಕೈಗೆ ಹತ್ತದಂತೆ ನಮ್ಮ ಹೆಸರಿನಲ್ಲಿ ಬ್ಯಾಂಕಿನಲ್ಲಿಡಬೇಕೆಂದು ಅಪ್ಪನಿಗೆ ಹೇಳುತ್ತೇನೆ. ಇಲ್ಲದಿದ್ದರೆ ನಮ್ಮ ಗತಿ ನೆಟ್ಟಗಾಗಲಿಕ್ಕಿಲ್ಲ.''

"ಅಕ್ಕಾ, ಹಾಗೆಯೇ ಮಾಡುವೆಯಂತೆ. ಈಗ ಮಾತ್ರ ಅದೆಲ್ಲ ವಿಚಾರಬಿಟ್ಟು ಒಂದೇ ಮನಸ್ಸಿನಿಂದ ದೇವರ ಜಪಮಾಡು. ದೇವರು ದಯಾಳುವು. ನಮ್ಮನ್ನೇನೂ ಮರೆಯಲಿಕ್ಕಿಲ್ಲ." ಆಗ ರಂಗೂಬಾಯಿಗೆ ಜಪಮಾಲೆಯ ನೆನಪಾಗಿ ಅವಳು ಪುನಃ ಜಪಮಾಡ ಹತ್ತಿದಳು. ಅವಳು ಎಷ್ಟು ಹೊತ್ತು ಒಂದು ಮನಸ್ಸಿನಿಂದ ಜಪ ಮಾಡಿದಳೋ ನಮಗಂತೂ ಹೇಳಲಿಕ್ಕೆ ಬರುವದಿಲ್ಲ.

---

೩.

## ಹಸುರು ನೋಟುಗಳ ಪ್ರವಾಸವು.



ಶಿವಶಿವ, ಎಂಥ ಕಲಿಕಾಲವಿದು! ನಾವು ದುಡ್ಡು ಸುರುವಿ ಹೊಲಾ ಕೊಳ್ಳಬೇಕು. ಮೇಲೆ ಹೊಲದ ಹಣದ ವಸೂಲಿಗೆ ರೈತನ ಮೇಲೆ ಮೊಕದ್ದಮೆ ನಡಿಸಿ ಕೋರ್ಟಿಗೆ ಎಡತಾಕಬೇಕು. ಎಂಥ ಠಕ್ಕರಪ್ಪಾ ಈಗಿನ ರೈತರು! ನಮ್ಮ ಹೊಲದ ದುಡ್ಡು ನಮಗೆ ಕೊಡಲಿಕ್ಕೆ ಎಷ್ಟು ತೊಂದರೆ! ಎಷ್ಟು ಖಟಾಟೋಪ!

ಈ ಪ್ರಕಾರ ಆದೇ ಕೋರ್ಟಿನಿಂದ ತಿರುಗಿ ಬಂದು ಉಶ್ಶೆಂದು ಕೂತುಕೊಂಡ ಮಾಧವರಾಯರ ಮನಸ್ಸು ವಿಚಾರತರಂಗಗಳಲ್ಲಿ ತೇಲಾಡುತ್ತಿತ್ತು. ಅವರ ಹೊಲದ ರೈತನಾದ ಬಸಪ್ಪನು ಅದೇ ಊರವನು. ಅವನು ರಾಯರಿಗೆ ವರುಷಕ್ಕೆ ೩೦೦ ರೂಪಾಯಿ ಲಾವಣಿಯನ್ನು ಸಲ್ಲಿಸಬೇಕಾಗಿತ್ತು. ಆ ವರ್ಷ ಧಾನ್ಯಗಳ ಧಾರಣಿಯೆಲ್ಲ ಇಳಿದು ಹೋದದ್ದರಿಂದ ಅರ್ಧ ಹಣದ ಮೇಲೆ ತೀರಿಸಿಕೊಳ್ಳಬೇಕೆಂದು ಮಾಧವರಾಯರಿಗೆ ಅಂಗಲಾಚಿ ಬೇಡಿಕೊಂಡನು.

"ಅದೆಲ್ಲ ಆಗದ ಮಾತು. ನೀನು ಪೂರಾ ಹಣಾ ಕೊಟ್ಟೇ ತೀರಬೇಕು. ನಮ್ಮ ಪ್ರಪಂಚವು ಸಾಗಬೇಡವೇ? ಮನೆಯಲ್ಲಿ ದಿನಾಲು ಬ್ರಾಹ್ಮಣ ಭೋಜನ, ದಕ್ಷಿಣೆ, ಮೇಲಿಂದಮೇಲೆ ಹಬ್ಬ ಹುಣ್ಣಿವೆ, ಹವ್ಯಕವ್ಯಗಳು, ಇವೆಲ್ಲಾ ದುಡ್ಡಿಲ್ಲದೆ ಸಾಗುವವೇ?" ಎಂದು ಮಾಧವರಾಯರು ವಾದಿಸಿದರು.

"ಸ್ವಾಮಿ, ತಾವು ಎಷ್ಟಾದರೂ ಧನಿಕರು. ಕಷ್ಟನಷ್ಟಗಳನ್ನು ಸಹಿಸಲಿಕ್ಕೆ ತಮಗೆ ಸಾಮರ್ಥ್ಯವಿದೆ. ನಾನು ಬಡವನು. ಮಕ್ಕಳೊಂದಿಗನು. ಮೇಲಾಗಿ ರಟ್ಟೇ ಮುರಿದು ದುಡಿಯುವ ನನ್ನ ದೊಡ್ಡ ಮಗನು ಈಗೆರಡು ವರ್ಷದ ಹಿಂದಿನ ಮಾರೀಬೇನೆಯ ಹಾವಳಿಯಲ್ಲಿ ಸತ್ತು

ಹೋದನೆಂಬದು ತಮಗೆ ಗೊತ್ತಿದೆ. ಆದ್ದರಿಂದ ತಾವು ದಯಮಾಡಿ ಅರ್ಧ ಹಣವನ್ನು ಸೂಟ ಬಿಟ್ಟರೆ ಬಡವನ ಮನೆತನ ಉದ್ಧಾರವಾಡಿದಂತಾಗುತ್ತದೆ'' ಎಂದು ಬಸಪ್ಪನು ಹಲುಬಿದನು.

“ ಹೌದೋ, ನೀನು ಹೇಳುವದೆಲ್ಲ ನಿಜ. ಆದರೆ ಬಿಟ್ಟುಬಿಡಲಿಕ್ಕೆ ಸಣ್ಣ ಗಂಟೆ? ಬರುವ ೧೫೦ರೂ. ಗಳನ್ನು ಬಿಟ್ಟುಕೊಡಲಿಕ್ಕೆ ಹೇಗಾದೀತು? ಒಂದು ವೇಳೆ ನೀನು ಅರ್ಧ ಹಣಾ ಈಗ ಕೊಟ್ಟು ಉಳಿದ ಹಣದ ಎರಡು ಪಟ್ಟಿಗೆ ನೂರಕ್ಕೆ ೨೫ರಂತೆ ಬಡ್ಡೀ ಹಾಕಿ ಸಾಲದ ಪತ್ರವನ್ನು ಬರೆದುಕೊಟ್ಟರೆ ಒಂದು ವೇಳೆ ವಿಚಾರ ಮಾಡಬಹುದು ” ಎಂದು ಮಾಧವರಾಯರು ದೊಡ್ಡಸ್ತನ ತೋರಿಸಿದರು.

“ ಸ್ವಾಮಿ, ಇಷ್ಟು ಹಣಾ ಬಡ್ಡೀ ಸಹಿತ ಮುಂದಿನ ವರ್ಷವಾದರೂ ತಮಗೆ ಎಲ್ಲಿಂದ ಕೊಡಲಿ? ಹತ್ತಿಯ ಧಾರಣೆಯು ಇಳಿದು ಹೋಗಿದೆ. ಭತ್ತಜೋಳಗಳ ಬೆಲೆಯು ಬಹಳ ಕಡಿಮೆಯಾಗಿದೆ. ತಮಗೆ ಸುಮ್ಮನೇ ಮಾತುಕೊಟ್ಟು, ಕೊಟ್ಟ ಮಾತಿಗೆ ತಪ್ಪಲಾರೆ. ಆದ್ದರಿಂದ ಅರ್ಧ ಹಣವನ್ನು ತಕ್ಕೊಂಡು ನಿಮ್ಮ ಮಗನ ಉದ್ಧಾರ ಮಾಡಬೇಕು ” ಎಂದು ಬಸಪ್ಪನು ಧನಿಯ ಕಾಲಿಗೆ ಬಿದ್ದು ಹೇಳಿಕೊಂಡನು.

ಏನಾದರೂ ಮಾಧವರಾಯರ ಹೃದಯವು ಕರಗಲಿಲ್ಲ.

ಕಡೆಗೆ ಮಾಧವರಾಯರು ಎಲ್ಲ ಹಣಕ್ಕೆ ಕೋರ್ಟಿನಲ್ಲಿ ಮೊಕದ್ದಮೆ ನಡೆಸಿ ರೈತನ ಮೇಲೆ ತಮ್ಮಂತೆ ತೀರ್ಪನ್ನು ಮಾಡಿಸಿಕೊಂಡರು. ಒಂದಾನೊಂದು ಕಾಲಕ್ಕೆ ಮಾಮಲೇದಾರರಿದ್ದವರು ಅಂದಮೇಲೆ ಅವರ ಮಾತನ್ನು ನಂಬುವದು ಬಿಟ್ಟು ರೈತನ ಮಾತು ಯಾರಾದರೂ ಕೇಳುವರೇ? ತೀರ್ಪಾಯಿತು. ಮುಂದೆ ರೈತನ ಮೇಲೆ ಅದನ್ನು ಅಮಲಿನಲ್ಲಿ ತಂದು ಜಂಗಮ ಜಿಂದಿಗೆಯ ಜಪ್ತೀ ಮಾಡಿಸುವದಕ್ಕಾಗಿ ಕೋರ್ಟಿನ ಅಪ್ಪಣೆಯನ್ನು ಪಡೆದುಕೊಳ್ಳುವದಕ್ಕೆ ಹೋಗಿ ಕೋರ್ಟಿನ ಅಪ್ಪಣೆಯನ್ನು ಪಡೆದುಕೊಂಡು ಮಾಧವರಾಯರು ಮನೆಗೆ ಬಂದರು. ಕೋರ್ಟಿನಲ್ಲಿ ಅತ್ತಿತ್ತ ವೈಶಾಖಮಾಸದ ಬಿಸಿಲಲ್ಲಿ ಅಡ್ಡಾಡಿ ರಾಯ

ರಿಗೆ ಒಳ್ಳೇ ಬೇಜಾರಾಗಿತ್ತು. ಆ ಬೇಜಾರದ ಭರದಲ್ಲಿ ಅವರ ಮನಸ್ಸಿನಲ್ಲಿ ಅನೇಕ ವಿಚಾರ ಪರಂಪರೆಗಳು ತಲೆದೋರುತ್ತಿದ್ದವು.

ಬಸಪ್ಪನು ಮನಮುಟ್ಟಿ ದುಡಿಯುವ ರೈತನು. ಅವನು ಒಬ್ಬರಿಗೆ ಕೊಡುವ ಹಣವನ್ನು ಹೀಗೆ ಎಂದೂ ಇಟ್ಟುಕೊಂಡು ಕೂಡ್ರುವವನಲ್ಲ. ಆದರೆ ಈಗೆರಡು ವರ್ಷಗಳಿಂದ ಅವನ ಆಟವು ನಿಂತು ಹೋಗಿತ್ತು. ಮನೆಯಲ್ಲಿ ಅವನ ಹೆಂಡತಿ ಮತ್ತು ಸಣ್ಣ ಸಣ್ಣ ಆರು ಮಕ್ಕಳು - ಎರಡು ಗಂಡು, ನಾಲ್ಕು ಹೆಣ್ಣು. ವಯಸ್ಸಿಗೆ ಬಂದ ಒಬ್ಬ ಮಗನನ್ನು ದುರ್ದೈವವು ಕಟ್ಟಿಕೊಂಡು ಹೋಗಿತ್ತು. ಹೊಲದಲ್ಲಿ ಬೆಳೆದ ಎಲ್ಲ ಕಾಳುಗಳನ್ನು ಮಾರಿದರೂ ಧನಿಯ ದುಡ್ಡು ಮುಟ್ಟುವಂತಿದ್ದಿಲ್ಲ. ಬಸಪ್ಪನಲ್ಲಿ ಹಿರಿಯರು ಮಾಡಿದ ದುಡ್ಡು ಏನೂ ಇದ್ದಿಲ್ಲ. ಒಂದು ಮನೆ ಮಾತ್ರ ಇತ್ತು. ಕುಟುಂಬವು ಬಹಳ ದೊಡ್ಡದಿದ್ದದರಿಂದ ಗಳಿಕೆಯನ್ನೂ ವೆಚ್ಚವನ್ನೂ ಬಾಯಿಗೂಡಿಸಬೇಕಾದರೆ ಬಹಳ ಪ್ರಯಾಸವಾಗುತ್ತಿತ್ತು. ಅವನು ಸಾಲಾ ತೆಗೆದು ಹೊಲದ ಯಜಮಾನನ ದುಡ್ಡು ಮುಟ್ಟಿಸಲೇಬೇಕೆಂದು ಹೆಣಗಾಡಿದನು. ಆದರೆ ತಾರಣವಿಲ್ಲದೆ ಅವನಿಗೆ ಸಾವುಕಾರನು ಹೇಗೆ ಸಾಲಾ ಕೊಡಬೇಕು? ಆದ್ದರಿಂದ ಜಂಗಮ ಜಿಂದಿಗೆಯ ಜಪ್ತಿಗೆ ಕೋರ್ಟಿನ ಅಪ್ಪಣೆಯಾದ ಕೂಡಲೇ, ಬಸಪ್ಪನು ಬಹಳ ಚಿಂತೆಗೊಳಗಾದನು. ಅವನ ಮನೆಯಲ್ಲಿ ಅಂಥ ಬೆಲೆಯುಳ್ಳ ಪದಾರ್ಥಗಳು ಏನೂ ಇದ್ದಿಲ್ಲ. ಎರಡು ಎತ್ತುಗಳು. ಒಂದು ಎಮ್ಮೆ, ಒಂದು ಆಕಳು ಮಾತ್ರ ಇದ್ದವು. ಮನೆಯಲ್ಲಿಯ ಪಾತ್ರಿಗಳೆಲ್ಲ ಬಹುತರವಾಗಿ ಮಣ್ಣಿನವು ಇವೆಲ್ಲ ಹೋಗುವವೆಂದು ಅವನು ಅಂಜಿದ್ದಿಲ್ಲ. ಆದರೆ ಜಪ್ತೀ ಆದರೆ ತನ್ನ ಮನೆತನದ ಮರ್ಯಾದೆಯು ಹೋಗುವದೆಂತಲೂ, ತನ್ನ ಮನೆತನದ ಒಳ್ಳೇ ಹೆಸರಿಗೆ ತಾನೇ ಮಸಿಹಚ್ಚಿದಂತೆ ಆಗುವದೆಂತಲೂ ಮುಂದೆಯಾರೂ ತನಗೆ ಹೊಲ ಕೊಡಲಿಕ್ಕಿಲ್ಲೆಂತಲೂ ಅವನು ಚಿಂತೆಯಲ್ಲಿ ಮುಳುಗಿ ದಂಡೆಗಾಣದೆ ಇದ್ದನು.

ಇಂಥ ಪ್ರಸಂಗದಲ್ಲಿ ಏನು ಮಾಡಬೇಕೆಂದು ತೋಚದೆ ತನ್ನ ನೆರೆಯವನಾದ ಬಳವಂತರಾಯನ ಮನೆಗೆ ಹೋದನು. ಹೇಗಾದರೂ ಮಾಡಿ ಜಿಂದಿಗೆಯ ಜಪ್ತಿಯನ್ನು ತಪ್ಪಿಸಬೇಕೆಂಬವೇ ಅವನ ಉದ್ದೇಶ.

ಬಳವಂತರಾಯನು ಮಾಧವರಾಯರ ಸೋದರತ್ತೆಯ ಮೊಮ್ಮಗನು. ಅವನ ತಾಯಿಯ ಹೆಸರು ರಾಧಾಬಾಯಿ. ಅವನ ತಂದೆಯಾದ ನಾರಾಯಣರಾಯನು, ಬಳವಂತನು ಚಿಕ್ಕವನಿರುವಾಗಲೇ, ತೀರಿಹೋಗಿದ್ದರೂ ಮುಂದೆ ರಾಧಾಬಾಯಿಯು ಅನಾಥಳಾಗಿ ಸಮೀಪದ ಸಂಬಂಧಿಕರು ಯಾರೂ ಇಲ್ಲದ್ದರಿಂದ ಗಂಗಾಬಾಯಿಯ ಅಗ್ರಹದ ಮೂಲಕ ಮಾಧವರಾಯರ ಮನೆಯಲ್ಲಿಯೇ ಇದ್ದಳು. ಮಾಧವರಾಯರಿಗೇನೋ ಇವರು- ತಾಯಿಮಕ್ಕಳು – ಬಂದು ತಮ್ಮ ಮನೆ ಸೇರಿದ್ದು ಮನಸ್ಸಿಗೆ ಬಂದಿದ್ದಿಲ್ಲ. ಆದರೆ ರಾಧಾಬಾಯಿಯ ಮೈಮೇಲಿ ವಸ್ತ್ರ ಒಡವೆಗಳು ಬಹಳ ಇದ್ದವರಿಂದ ಅವರು ಇದಕ್ಕೆ ಸಮ್ಮತಿಕೊಟ್ಟರೆನ್ನಬೇಕು. ನಾರಾಯಣರಾಯರು ಒಂದು ಖಾಸಗೀ ಹಾಯಸ್ಕೂಲಿನಲ್ಲಿ ಶಿಕ್ಷಕರಿದ್ದರು. ಅವರು ಬಹಳ ಮಿತವ್ಯಯದಿಂದಿದ್ದು ಮತ್ತು ಲೇಖನ ವ್ಯವಸಾಯವನ್ನು ಮಾಡಿ ಎರಡುಸಾವಿರ ರೂಪಾಯಿ ಬ್ಯಾಂಕಿನಲ್ಲಿಟ್ಟು ಮನೆಯಲ್ಲಿ ಸುಮಾರು ನಾಲ್ಕು ಶೇರು ಬಂಗಾರ ಮಾಡಿದ್ದರು. "ಇನ್ನೇಕೆ ನನಗೆ ಈ ವಸ್ತ್ರ ಒಡವೆಗಳು? ಇವನ್ನು ಮಾರಿ ಬಂದ ಹಣವನ್ನು ಉಳಿದ ಹಣದೊಂದಿಗೆ ಬ್ಯಾಂಕಿನಲ್ಲಿಡಿರಿ. ಬಡ್ಡಿಯಾದರೂ ಬಂದೀತು" ಎಂದು ರಾಧಾಬಾಯಿಯು ಎಲ್ಲ ಒಡವೆಗಳನ್ನು ಮಾಧವರಾಯರ ವಶಮಾಡಿದಳು. ಮಾಧವರಾಯರಾದರೂ ಅವುಗಳನ್ನೆಲ್ಲ ಮಾರಿ ಬ್ಯಾಂಕಿನಲ್ಲಿಟ್ಟರು.

ಬಳವಂತನು ಮ್ಯಾಟ್ರಿಕ್ ಪರೀಕ್ಷೆಯಾಗುವ ವರೆಗೆ ಮಾಧವರಾಯರಲ್ಲಿಯೇ ಕಲಿತನು. ಅವನ ಬುದ್ಧಿಯು ಬಹಳ ಚುರುಕು. ಜನರ ಪ್ರೀತಿಯನ್ನು ಶೀವ್ರವೇ ಸಂಪಾದಿಸುವ ಒಳ್ಳೇ ಸ್ವಭಾವವು. ಮೇಲಾಗಿ ತಂದೆಯು ಸತ್ತು ಹೋದದ್ದರಿಂದ ತನ್ನ ತಾಯಿಯು ಎರಡನೇಯವರ ಮನೆಸೇರಿ ದುಡಿಯುವವನ್ನು ನೋಡಿ ತಾನು ಕಲಿತು ಸಮರ್ಥನಾಗದ ಹೊರ್ತು ಗತ್ಯಂತರವಿಲ್ಲೆಂದು ಮನದಟ್ಟಾಗಿತ್ತು. ಅವನು ಪ್ರತಿ ವರ್ಷ ಉತ್ತಮ ರೀತಿಯಿಂದ ಪರೀಕ್ಷೆ ಪಾಸಾಗುತ್ತ ಕಡೆಗೆ ಮ್ಯಾಟ್ರಿಕ್ ಪರೀಕ್ಷೆಯಲ್ಲಿಯೂ ಬಹುಮಾನದೊಂದಿಗೆ ತೇರ್ಗಡೆ ಹೊಂದಿದನು. ಅವನಿಗೆ ಮುಂಪೆ ಕಲಿಸಿ ಎಮ್. ಎ. ಮಾಡಿಸಬೇಕೆಂದು ರಾಧಾಬಾ

ಯಿಯ ಹಂಬಲವಿತ್ತು. ಆದರೆ ಮುಂದೆ ಕಲಿಸುವದು ಮಾಧವರಾಯರ ಮನಸ್ಸಿಗೆ ಬರಲಿಲ್ಲ. "ಮುಂದೆ ಕಲಿತು ಏನು ಮಾಡುವದು? ಕಲಿಯು ವದರಲ್ಲಿ ದುಡ್ಡು ಸುರುವುವದು ದೊಡ್ಡ ಮೂರ್ಖತನ. ಬಳವಂತನು ಎಲ್ಲಿಯಾದರೂ ನೌಕರಿಯನ್ನು ಹಿಡಿಯುತ್ತಿದ್ದರೆ ನಾನು ನನ್ನಿಂದಾ ದಷ್ಟು ಸಹಾಯ ಮಾಡುವೆನು." ಎಂದು ಮಾಧವರಾಯರು ಹೇಳ ತೊಡಗಿದರು. "ಬುದ್ಧಿವಂತನಾದ ಹುಡುಗ; ಇನ್ನೂ ಕಲಿಯುವ ಆಸ್ಥೆ ಯಿದೆ. ಅದನ್ನು ಬಿಡಿಸಿ ಕಾರಕೂನಿಗೆ ಹಚ್ಚುವದು ಬೇಡ. ಅವನ ಹಿರಿಯರ ಮನಸ್ಸಿನಲ್ಲಿಯೂ ಕಲಿಸಬೇಕೆಂದು ಬಹಳ ಅಭಿಲಾಷೆಯಿತ್ತು. ಆದ್ದರಿಂದ ಸಾಕೆನ್ನುವತನಕ ಕಲಿಯಲಿ" ಎಂದು ಮೊದಲಾಗಿ ರಾಧಾ ಬಾಯಿಯು ಅನ್ನುತ್ತಿದ್ದಳು.

ಅಷ್ಟರಲ್ಲಿಯೇ ಮಾಧವರಾಯರ ಹೆಂಡತಿಯಾದ ಗಂಗಾಬಾ ಯಿಯು ತೀರಿದಳು. ಗಂಗಾಬಾಯಿಯು ಇರುವ ತನಕ ಅವಳು ಮನೆ ಯೊಳಗಿನ ಜನರ ಪರಾಮರಿಕೆಯನ್ನು ಚನ್ನಾಗಿ ಮಾಡುತ್ತಿದ್ದಳು. ಅವಳು ರಾಧಾಬಾಯಿಯನ್ನು ತನ್ನ ತಂಗಿಯಂತೆ ನೋಡುತ್ತಿದ್ದಳು. ಆಕೆಯ ಮನಸ್ಸು ಯಾವರೀತಿಯಿಂದಲೂ ನೋಯಬಾರದೆಂದು ಎಷ್ಟೋ ದಿವಸ ಅವಳಿಗೆ ಮನೆಗೆಲಸವನ್ನೇ ಹಚ್ಚಲಿಲ್ಲ. ಆದರೆ ಮುಂದೆ ಮುಂದೆ ಗಂಗಾಬಾಯಿಗೆ ಜಡ್ಡು ಆದಮೇಲೆ ರಾಧಾಬಾಯಿಯು ಮನೆಯ ಎಲ್ಲ ಕೆಲಸದೊಳಗೆ ಹೋಗತೊಡಗಿದಳು. ಅವಳು ನಿರಭಿಮಾನ ಸ್ವಭಾವ ದವಳು. ಯಾವ ಕೆಲಸಕ್ಕೂ ಹಿಂಜರಿಯುತ್ತಿದ್ದಿಲ್ಲ.

ಗಂಗೂಬಾಯಿಯು ತೀರಿದ ಮೇಲೆ ರಾಧಾಬಾಯಿಗೆ ಆ ಮನೆ ಯಲ್ಲಿ ನಿಲ್ಲುವದು ಬಹಳ ಕಠಿಣವಾಯಿತು. ರಂಗೂಬಾಯಿಗೆ ಮನೆಯ ಎಲ್ಲ ಕಾರಭಾರವನ್ನು ತಾನೇ ನೋಡಬೇಕೆಂದೆನಿಸಿತು. ಅವಳು ರಾಧಾ ಬಾಯಿಯನ್ನು ಕೂಳಿಗಾಗಿ ಮನೆ ಸೇರಿದ ಒಬ್ಬ ಆಶ್ರಿತಳಂತೆ ಕಾಣ ಹತ್ತಿದ್ದಳು. ಆದ್ದರಿಂದ ಇನ್ನು ಈ ಮನೆಯಲ್ಲಿರುವದು ನೆಟ್ಟಗಲ್ಲ ವೆಂದು ರಾಧಾಬಾಯಿಗೆ ಅನಿಸಿತು. ಆದರೆ ಒಮ್ಮಿಂದೊಮ್ಮೆ ಹೇಗೆ ಬಿಟ್ಟು ಹೋಗಬೇಕೆಂಬದು ಅವಳಿಗೆ ತಿಳಿಯಲಿಲ್ಲ.

ಮುಂದೆ ಮುಂದೆ ಮಾಧವರಾಯರು ಮೇಲಿಂದ ಮೇಲೆ ಬಳವಂತ್ರನ ನೌಕರಿಯ ಮಾತು ಎತ್ತಹತ್ತಿದರು. ಆಗ ರಾಧಾಬಾಯಿಯು "ಅಣ್ಣಾ, ದಯಮಾಡಿ ಅವನ ಶಿಕ್ಷಣವನ್ನು ನಿಲ್ಲಿಸುವದು ಬೇಡ. ಪೂರಾ ಕಲಿಯಲಿ. ಹೇಗಾದರೂ ಬ್ಯಾಂಕಿನ ಬಡ್ಡಿ ಬರುತ್ತದೆ. ಅದು ಸಾಲದಿದ್ದರೆ ಮೂಲಧನವನ್ನಾದರೂ ಉಪಯೋಗಿಸಿ ಅವನಿಗೆ ಕಲಿಷಬೇಕು" ಎಂದು ರಾಧಾಬಾಯಿಯು ಹೇಳಿದಳು.

ಆಗ ಮಾಧವರಾಯರು– "ಛೇ, ಹುಚ್ಚೀ, ಎಲ್ಲಿಯ ಬ್ಯಾಂಕಿನ ಬಡ್ಡಿ! ಆಕೆಯು ನಿನಗೆ ಎಲ್ಲಾ ಸಂಗತಿ ಹೇಳಲಿಲ್ಲ ಅಂತಾ ಕಾಣತದೆ." ರಾಧಾಬಾಯಿ– "ಅಣ್ಣಾ ಏನದು ಹೀಗೆ ಅನ್ನುವಿರಿ? ನನಗೇನೂ ಯಾವ ಸುದ್ದಿಯೂ ಇಲ್ಲ" ಎಂದು ಬಹಳ ಗಾಬರಿಯಾಗಿ ನುಡಿದಳು. ಮಾಧವರಾಯರು ಬಹಳ ಕೆಟ್ಟ ಮೋರೆಯನ್ನು ಮಾಡಿ ನೆಲದ ಕಡೆಗೆ ನೋಡುತ್ತ "ರಾಧಾ, ಅವಳು ನಿನಗೆ ಹೇಳಿರಬೇಕೆಂದು ನಾನೂ ತಿಳಿದಿದ್ದೆ ಏನು ಮಾಡುವದು? ಆರು ವರ್ಷಗಳ ಹಿಂದೆಯೇ ಆ ಬ್ಯಾಂಕು ದಿವಾಳೀ ತೆಗೆದದ್ದರಿಂದ ನಿನ್ನ ಹಣವೆಲ್ಲ ಮುಳುಗಿದ್ದಲ್ಲದೆ ನನ್ನದೂ ಒಂದು ಸಾವಿರ ರೂಪಾಯಿ ಹೋಯಿತು. ನಿನ್ನ ದುಡ್ಡು ಇದ್ದರೆ ನಿನ್ನ ಮಗನ ಉಚ್ಚ ಶಿಕ್ಷಣಕ್ಕೆ ನಾನೆಲ್ಲಿ ಅಡ್ಡಬರುತ್ತಿದ್ದೆ" ಎಂದು ಬಹಳ ಚಡಪಡಿಸುತ್ತ ಉಸುರಿದರು. ಇದನ್ನು ಕೇಳಿ ರಾಧಾಬಾಯಿಯು ಝುರ್‍ರೆಂದು ಇಳಿದುಬಿಟ್ಟಳು.

ಅವಳಿಗೆ ದಿಗ್ಭ್ರಮೆಯುಂಟಾಯಿತು. ಮಾಧವರಾಯರು ದುಡ್ಡು ಎತ್ತಿಹಾಕಿ ಈ ಮಾತನ್ನು ಆಡುತ್ತಾರೆಂದು ಅವಳಿಗೆ ಕೂಡಲೇ ಹೊಳೆಯಿತು. ಬ್ಯಾಂಕು ದಿವಾಳೀ ತೆಗೆದದ್ದು ನಿಜವಾಗಿದ್ದರೆ ಕೋಮಲ ಸ್ವಭಾವದವಳಾದ ಗಂಗಾಬಾಯಿಯು ತನಗೆ ಎಂದೂ ತಿಳಿಸದೆ ಬಿಡುತ್ತಿದ್ದಿಲ್ಲವೆಂತಲೂ ಹೋದ ಹಣದ ಬದಲಾಗಿ ಧನಿಕನಾದ ತನ್ನ ಗಂಡನಿಂದ ಸ್ವಲ್ಪಾನರೂ ಹಣ ಕೊಡಿಸುವ ಯೋಜನೆ ಮಾಡುತ್ತಿದ್ದಳೆಂತಲೂ ಅವಳಿಗೆ ಗೊತ್ತಿತ್ತು. ಈಗ ಮಾತ್ರ ಮಾಧವರಾಯರ ಕುಟಿಲತನವು ಅವಳಿಗೆ ತಿಳಿಯಿತು. ತನ್ನ ಗಂಡನ ಬ್ಯಾಂಕಿನ ಪುಸ್ತಕವನ್ನೂ ತನ್ನ ವಸ್ತ್ರ ಒಡವೆಗಳನ್ನೂ ಅವರ ಕೈಯಲ್ಲಿ ಕೊಟ್ಟು ತನ್ನ ಮಗನ

ಘಾತ ಮಾಡಿದೆನೆಂದು ನೊಂದುಕೊಂಡಳು. ಅವಳು ಎಲ್ಲ ದುಡ್ಡನ್ನು ತನ್ನ ಹೆಸರಿನ ಮೇಲೆ ಇಡಲಿಕ್ಕೆ ಒಮ್ಮೆ ಸೂಚಿಸಿದ್ದಳು. ಆದರೆ ಮಾಧವರಾಯರು ಹಾಗೆ ಮಾಡದೆ ಎಲ್ಲ ದುಡ್ಡನ್ನು ತಮ್ಮ ಹೆಸರಿನ ಮೇಲೆ ಇಟ್ಟುಕೊಂಡು ಮುಂದೆ ಹೀಗೆ ಕಪಟರಚನೆಯನ್ನು ಮಾಡಿದ್ದರು.

ರಾಧಾಬಾಯಿಯು ತನ್ನ ದಡ್ಡತನವನ್ನೂ ವಿಚಾರ ಮಾಡದೆ ದುಡ್ಡಿನ ವಿಷಯದಲ್ಲಿ ಮಂದಿಯ ಮೇಲೆ ವಿಶ್ವಾಸವಿಟ್ಟಿದ್ದನ್ನೂ ನೆನೆನೆನೆದು ತನ್ನನ್ನು ತಾನೇ ಚನ್ನಾಗಿ ಹಳಿದುಕೊಂಡಳು. ಆದರೆ ಇನ್ನು ಮಾಡುವದೇನು? ಇನ್ನು ಮಾತ್ರ ಮಾಧವರಾಯರ ಮನೆಯಲ್ಲಿ ಸರ್ವಥಾ ನಿಲ್ಲಬಾರದೆಂದು ನಿಶ್ಚಯಿಸಿ ಮರುದಿವಸ ಮುಂಜಾನೆ ಬಳವಂತನ ಸಂಗಡ ಅಡ್ಡಾಡಿ ಒಂದು ಮನೆಯನ್ನು ಬಾಡಿಗೆ ಹಿಡಿದು ತನ್ನ ಸಾಮಾನುಗಳನ್ನು ತೆಗೆದುಕೊಂಡು ಬಂದು ಇರಹತ್ತಿದಳು.

ರಾಧಾಬಾಯಿಯು ತನ್ನ ಮೈಮೇಲಿರುವ ಒಂದೆರಡು ವಸ್ತಗಳನ್ನೂ ಮುತ್ತಿನ ಒಡೆವೆಗಳನ್ನೂ ಮಾಧವರಾಯರ ವಶಮಾಡಿದ್ದಿಲ್ಲ. ಇಷ್ಟಾದರೂ ಜಾಣತನವನ್ನು ಮಾಡಿದೆನೇದು ಅವಳಿಗೆ ಕೊಂಚ ಸಮಾಧಾನವಾಯಿತು

ಅವನ್ನೆಲ್ಲ ತಾನೇ ಸ್ವತಃ ಬಳವಂತನ ಸಂಗಡ ಹೋಗಿ ಮಾರಿ, ಬಂದ ಐದು ನೂರು ರೂಪಾಯಗಳನ್ನು ತನ್ನ ಹೆಸರಿನ ಮೇಲೆ ಬ್ಯಾಂಕಿನಲ್ಲಿಡಿಸಿದಳು. ಇದೇ ದುಡ್ಡಿನಲ್ಲಿ ತಿಂಗಳೊಂದಕ್ಕೆ ಇಪ್ಪತ್ತು ರೂಪಾಯಿಗಳನ್ನು ತೆಗೆದುಕೊಂಡು ಬಡತನದಿಂದ ಮನೆಯ ಚರಿತಾರ್ಥ ಸಾಗಿಸಹತ್ತಿದಳು. ಆದರೆ ಹೀಗೆ ಎಷ್ಟು ದಿವಸ ನಡೆದೀತೆಂಬ ಚಿಂತೆಯು ಆವಳ ಎದೆಯಲ್ಲಿ ಹಗಲು ರಾತ್ರಿ ಕಟೆಯುತ್ತಿತ್ತು.

ಇಷ್ಟರಲ್ಲಿ ರಾಧಾಬಾಯಿಗೆ ದೇವರೇ ಸಹಾಯ ಮಾಡಿದನೆನ್ನಬೇಕು. ನಾರಾಯಣರಾಯರ ಕಕ್ಕನ ಮಗನಾದ ಗೋವಿಂದರಾಯನು ಬಳ್ಳಾರಿಯಲ್ಲಿ ಆಯುರ್ವೇದ ವೈದ್ಯನಾಗಿದ್ದನು. ಈ ಸಮಯಕ್ಕೆ ಅವನ ಹೆಂಡತಿಯು ಹಡೆದು ತೀರಿಕೊಂಡಳು. ಅವನಿಗೆ ರಾಮನೆಂಬ ಒಬ್ಬ ಹದಿನಾರು ವರ್ಷದ ಮಗನೂ, ಸಣ್ಣ ಸಣ್ಣ ನಾಲ್ಕು ಮಕ್ಕಳೂ ಇದ್ದರು. ಮನೆಯಲ್ಲಿ ಸಣ್ಣ ಮಕ್ಕಳನ್ನು ನೋಡಿಕೊಂಡು ಹೋಗು

ವವರು ಯಾರೂ ಇದ್ದಿಲ್ಲ. ಅವರಿಗೆ ಮಧ್ಯಾಹ್ನ ಅನ್ನಗಾಣುವದೇ ಪರಾಕಷ್ಠೆಯಾಗಿತ್ತು. ಆದ್ದರಿಂದ ಗೋವಿಂದರಾಯನು ಪತ್ರ ಬರೆದು ರಾಧಾಬಾಯಿಯನ್ನೂ ಬಳವಂತನನ್ನೂ ಕರೆಯಿಸಿಕೊಂಡನು. ರಾಧಾಬಾಯಿಗೆ ಮನೆಯ ಆಡಳಿತವನ್ನು ಒಪ್ಪಿಸಿ ಬಹಳ ವಿಶ್ವಾಸದಿಂದಲೂ ದಾಕ್ಷಿಣ್ಯದಿಂದಲೂ ಅವಳ ಸಂಗಡ ನಡೆಯಹತ್ತಿದನು. ಅವನ ಪ್ರಯತ್ನದಿಂದಲೇ ಬಳವಂತನಿಗೆ ಮುಂಬಯಿಯ ಪಶುವೈದ್ಯದ ಕಾಲೇಜಿನಲ್ಲಿ ಶಿಷ್ಯವೃತ್ತಿಯು ಶಿಕ್ಕಿತು. ಮುಂದೆ ನಾಲ್ಕು ವರ್ಷಗಳಲ್ಲಿ ಬಳವಂತನು ಶಿಕ್ಷಣವನ್ನು ಮುಗಿಸಿಕೊಂಡು ತನ್ನ ತಾಯಿಯನ್ನು ಕರೆದುಕೊಂಡು ಶಂಕರಪುರಕ್ಕೆ ಬಂದು ಇರಹತ್ತಿದನು. ನೌಕರಿಯನ್ನು ದೊರಕಿಸಲಿಕ್ಕೆ ಎಷ್ಟೋ ಕಡೆಗೆ ಅರ್ಜಿಗಳನ್ನು ಕಳಿಸಿದನು. ಆದರೆ ಎಲ್ಲಿಯೂ ನೌಕರಿ ಹತ್ತದ್ದರಿಂದ ಅದರ ಹವ್ಯಾಸವನ್ನು ಬಿಟ್ಟುಕೊಟ್ಟು ಗೋವಿಂದರಾಯನಿಂದ ಐದುನೂರುರೂಪಾಯಿ ಸಾಲಾ ತೆಗೆದುಕೊಂಡು ನಾಲ್ಕು ಎಮ್ಮೆಗಳನ್ನೂ ನಾಲ್ಕು ಆಕಳುಗಳನ್ನೂ ಕೊಂಡು-ತಂದು ಒಂದು 'ಡೇರಿ' ಅಂದರೆ ಹಾಲು ಪೂರೈಸುವ ಸಂಸ್ಥೆಯನ್ನು ತೆಗೆದನು. ಊರೊಳಗಿನ ದನಗಳ ರೋಗ ಚಿಕಿತ್ಸೆಯನ್ನೂ ಮಾಡುತ್ತಿದ್ದನು ಇನ್ನೂ ಆರಂಭವಿದ್ದದರಿಂದ ಅವನಿಗೆ ವಿಶೇಷ ಪ್ರಾಪ್ತಿಯಾಗುತ್ತಿದ್ದಿಲ್ಲ. ಇಬ್ಬರ ಚರಿತಾರ್ಥವು ಮಾತ್ರ ಬಡತನದ ರೀತಿಯಿಂದಸಾಗುತ್ತಿತ್ತು.

ಬಳವಂತನಿಗೂ ಮಾಧವರಾಯನ ರೈತನಾದ ಬಸಪ್ಪನಿಗೂ ಇತ್ತ ಕಡೆಗೆ ಸ್ವಲ್ಪ ವಿಶೇಷ ಪರಿಚಯವಾಗಿತ್ತು. ಇಬ್ಬರ ಮನೆಗಳೂ ಸಮೀಪವಿದ್ದದ್ದು ಒಂದು ಕಾರಣ. ಬಳವಂತನು ಬಸಪ್ಪನ ಎತ್ತುಗಳಿಗೆ ಬೇನೆ ಬಂದಾಗ ಔಷಧೋಪಚಾರವನ್ನು ಮಾಡಿ ಅವುಗಳನ್ನು ನೆಟ್ಟಗೆ ಮಾಡಿದ್ದು ಎರಡನೇ ಕಾರಣ. ಇದರಿಂದ ಬಸಪ್ಪನಿಗೆ ಬಳವಂತನ ಮೇಲೆ ತುಂಬಾ ವಿಶ್ವಾಸವಿತ್ತು. ಬಸಪ್ಪನ ಹೆಂಡತಿಯೂ ಮೇಲಿಂದಮೇಲೆ ರಾಧಾಬಾಯಿಯ ಹತ್ತರ ಬಂದು ತನ್ನ ಸಣ್ಣಮಕ್ಕಳಿಗೆ ಗಿಡಮೂಲಿಕೆಯ ಔಷಧಗಳನ್ನು ಕೇಳಿಕೊಂಡು ಹೋಗುತ್ತಿದ್ದಳು. ಈ ಪ್ರಕಾರ ಬಸಪ್ಪನಿಗೂ ಬಳವಂತನಿಗೂ ಖಣಾಸು ಬಂಧವುಂಟಾಗಿತ್ತು.

ಬಸಪ್ಪನ ಮೇಲೆ, ಮೇಲೆ ಹೇಳಿದ ಆಪತ್ತು ಅಂದರೆ ಜಪ್ತಿಯ ಹುಕುಮು ಬರಲಾಗಿ ಅವನು ಮರುದಿವಸ ಮುಂಜಾನೆ ನೆಟ್ಟಗೆ ಬಳವಂತನ

ಕಡೆಗೆ ಬಂದನು. ಆದ ಸಂಗತಿಗಳನ್ನು ಹೇಳಿದನು. ಆದರೆ ಬಳವಂತನ ಸಾಂಪತ್ತಿಕ ಸ್ಥಿತಿಯು ಅವನಿಗೆ ಗೊತ್ತಿದ್ದದರಿಂದ ಸಾಲಾ ಕೊಡೆಂದು ಕೇಳುವದು ಅವನಿಂದಾಗಲಿಲ್ಲ. ಎಲ್ಲವನ್ನು ಕೇಳಿಕೊಂಡನಮೇಲೆ ಬಳವಂತನು ಸ್ವಲ್ಪ ಹೊತ್ತು ವಿಚಾರಿಸಿ - " ಬಸಪ್ಪಾ, ಮಾಧವರಾಯರಿಗೆ ಇನ್ನೊಮ್ಮೆ ಯಾಕೆ ಹೇಳಿಕೊಳ್ಳಬಾರದು ? " ಎಂದನು.

ಬಸಪ್ಪ- " ಮಹಾರಾಯರೇ, ಅವನಿಗೆ ಹೋಗಿ ಹೇಳಿಕೊಳ್ಳುವದಕ್ಕಿಂತ ಒಂದು ಬಂಡೆಗಲ್ಲಮೇಲೆ ತಲೆ ಒಡೆದುಕೊಳ್ಳುವದು ಲೇಸು. ಅದರಿಂದೇನೂ ಆಗಲಾರದು " ಎಂದು ನಿರಾಶೆಯಿಂದ ನುಡಿದನು.

ಬಳವಂತ- " ನಿನಗೆ ಹಾಗೆ ಅನಿಸಬಹುದು. ಆದರೆ ನಾನೊಂದು ಸಾರೆ ಪ್ರಯತ್ನ ಮಾಡಿಯೇ ನೋಡಬೇಕೆನ್ನುತ್ತೇನೆ. ಅದರಲ್ಲೇನು ತಪ್ಪು? ನೀನು ನನ್ನ ಸಂಗಡ ಬಾ " ಎಂದು ಹೇಳಿದನು. ಬಳವಂತನ ಆಗ್ರಹಕ್ಕೋಸ್ಕರವಾಗಿ ಬಸಪ್ಪನು ಒಡಂಬಟ್ಟನು. ಬಳವಂತನು ಅವನನ್ನು ಕರೆದುಕೊಂಡು ಮಾಧವರಾಯನ ಮನೆಗೆ ಹೋದನು.

ಬಳವಂತನು ಬಂದಕೂಡಲೇ ಮಾಧವರಾಯರಿಗೆ ಬಹಳ ಆಶ್ಚರ್ಯವಾಯಿತು. ತಮ್ಮ ಮನೆಯನ್ನು ಬಿಟ್ಟು ಹೋದನಮೇಲೆ ಈ ಹೊತ್ತಿನವರೆಗೆ ತಮ್ಮ ಮನೆಯಲ್ಲಿ ಎಂದೂ ಕಾಲಿಡದ ಬಳವಂತನು ಈ ಹೊತ್ತು ಏಕೆ ಬಂದನು? ಅವನ ಕೈಯಲ್ಲಿ ದುಡ್ಡಿಲ್ಲವೆಂಬದು ಅವರಿಗೆ ಗೊತ್ತಿತ್ತು; ಆದರೂ ಉಪಚಾರದಿಂದ ಅವನನ್ನು ಕೂಡ್ರಿಸಿಕೊಂಡು ಮಾಧವರಾಯರು - 'ತಮ್ಮಾ ಬಾಳೂ, ಇದೇನು? ಬಹಳ ಅಪರೂಪವಾಗಿ ನಮ್ಮ ಮನೆಗೆ ಬಂದೆ!'

ಬಳವಂತ- " ಕಾಕಾ, ಈ ಬಸಪ್ಪನ ಕೆಲಸದನಿಮಿತ್ತ ತಮ್ಮ ಭೆಟ್ಟಿಗೆ ಬಂದಿದ್ದೇನೆ. ಈ ಬಡವನಿಗೆ ಕೆಲವು ದಿವಸಗಳ ಅವಧಿಯನ್ನು ಕೊಟ್ಟರೆ ತಮ್ಮ ದುಡ್ಡನ್ನು ಒಪ್ಪಿಸುವನು. "

ಮಾಧವರಾಯರು- " ಇನ್ನೆಷ್ಟು ಅವಧಿಯನ್ನು ಕೊಡಬೇಕು? ಕೋರ್ಟಿನಲ್ಲಿಯೇ ಒಂದು ವರ್ಷ ಹೋಯಿತು. ಇನ್ನೂ ಅವಧಿ, ಅವಧಿ ಅವಧಿ ಅಂದರೆ ಅದೆಲ್ಲಾ ಸುಳ್ಳು ನೋಡು. ಕಾಲವಿಲಂಬ ಮಾಡಲಿಕ್ಕೆ ಇವನಿಗೆ ಒಂದು ನಿಮಿತ್ತ ಬೇಕಾಗಿದೆಯೇ ಹೊರತು ಮತ್ತೇನೂ ಇಲ್ಲ.'

ಬಳವಂತ– "ಕಾಕಾ, ಹಾಗೇನೂ ಇಲ್ಲ. ಒಂದು ತಿಂಗಳ ಅವಧಿಯನ್ನು ಕೊಡಿರಿ. ಅಷ್ಟರಲ್ಲಿ ಇವನು ನಿಮ್ಮ ದುಡ್ಡು ಕೊಡದ ಪಕ್ಷದಲ್ಲಿ ನಾನೇ ಕೊಡುವ ಹೊಣೆಯನ್ನು ಹೊರುತ್ತೇನೆ. ಅಲ್ಲಿಯ ವರೆಗೆ ಇವನ ಮನೆಯ ಜಪ್ತಿಯನ್ನು ಮಾಡಿಸಬಾರದು."

"ಓಹೋ ! ಎಷ್ಟು ಧೈರ್ಯವಪ್ಪಾ ನಿನ್ನದು. ನೀನಾದರೂ ದುಡ್ಡು ಎಲ್ಲಿಂದ ಕೊಡುವದು ? ನಿಮ್ಮ ಎಮ್ಮೆ ಆಕಳುಗಳನ್ನು ಒತ್ತೀ ಹಾಕುವಿಯೋ ಏನು ? " ಮಾಧವರಾಯರು ತಿರಸ್ಕಾರದ ನಗೆಯಿಂದ ನುಡಿದರು.

ಇದನ್ನು ಕೇಳಿ ಬಳವಂತನಿಗೆ ಬಹಳ ಕಷ್ಟವಾಯಿತು. ಮಾಧವ ರಾಯರು ತನ್ನ ದರಿದ್ರಾವಸ್ಥೆಯ ಬಗ್ಗೆ ಬಿಟ್ಟ ವಾಗ್ಬಾಣವು ಅವನ ಎದೆ ಯಲ್ಲಿ ಚನ್ನಾಗಿ ನಟ್ಟಿತು. ಆದರೆ ಅವನು ಮುಂದೆ ಏನೂ ಮಾತಾಡಲಿಲ್ಲ. "ಒಳ್ಳೇದು, ತಮ್ಮ ಇಷ್ಟವಿದ್ದಂತೆ ಆಗಲಿ" ಎಂದು ಹೇಳಿದವನೇ ಬಸಪ್ಪ ನನ್ನು ಕರೆದುಕೊಂಡು ಮನೆಗೆ ಬಂದನು. ರಾಧಾಬಾಯಿಗೆ ಆದ ಸಂಗತಿ ಗಳನ್ನು ಹೇಳಿದನು. "ನನಗೆ ಮೊದಲೇ ಗೊತ್ತಿತ್ತು ಏನೂ ಫಲಿತಾಂಶ ವಾಗದೆಂದು. ಆದರೂ ಏನೊ ಬಸಪ್ಪನ ದೈವಬಲವು ಹ್ಯಾಗಿದೆಯೋ ನೋಡ ಬೇಕೆಂದು ಸುಮ್ಮನಿದ್ದೆ" ಎಂದು ಆಕೆ ನುಡಿದಳು.

ಅಷ್ಟೊತ್ತಿಗೆ ಮಧ್ಯಾಹ್ನವಾದದ್ದರಿಂದ ಬಳವಂತನು ಬಸಪ್ಪನಿಗೆ 'ಸಂಜೆಯಮುಂದೆ ಬಾ' ಎಂದು ಹೇಳಿ ಕಳುಹಿಸಿ ಭೋಜನಕ್ಕೆ ಹೋದನು. ಆ ದಿನ ಯಾರಿಗೂ ಊಟ ಸವಿಹತ್ತಲಿಲ್ಲ. ಬಸಪ್ಪನನ್ನು ಹ್ಯಾಗೆ ಪಾರು ಮಾಡಬೇಕೆಂಬುದು ಅವರಿಗೆ ತೋಚಲಿಲ್ಲ. ಆ ದಿವಸ ಬಳವಂತನು ಏನೂ ಮಾತಾಡದೆ ಊಟ ಮುಗಿಸಿದನು. ರಾಧಾಬಾಯಿಗೂ ಮಾಧವರಾಯರು ಆಡಿದ ಮರ್ಮಭೇದಕ ಮಾತುಗಳಿಂದ ತುಂಬಾ ವ್ಯಸನವುಂಟಾಗಿತ್ತು. ತನ್ನ ಗಂಡನ ದುಡ್ಡಾದರೂ ಇದ್ದಿದ್ದರೆ ಅವನಿಗೆ ಕೊಟ್ಟುಬಿಡುತಿದ್ದೆನೆಂದು ಮನ ಸ್ಸಿನಲ್ಲಿ ಅಂದುಕೊಂಡಳು.

ಸಾಯಂಕಾಲದಲ್ಲಿ ಬಸಪ್ಪನು ಬಳವಂತನ ಕಡೆಗೆ ಬಂದನು. ಇಷ್ಟ ರಲ್ಲಿ ಬಳವಂತನು ಎರಡು ಮೂರು ಸ್ಥಳಗಳಿಗೆ ಹೋಗಿ ಸಾಲಾ ದೊರಕಿ ಸುವ ಯತ್ನ ಮಾಡಿದ್ದನು. ಆದರೆ ತಾರಣವಿಲ್ಲದೆ ಯಾರೂ ಮೂರು ನಾಲ್ಕು

ನೂರು ರೂಪಾಯಿ ಸಾಲಾಕೊಡಲಿಕ್ಕೆ ಒಪ್ಪಲಿಲ್ಲ. ಬಸಪ್ಪನಿಗಂತೂ ಸ್ವಂತಃ ಹೊಲವಿದ್ದಿಲ್ಲ. ಸಣ್ಣದೊಂದು ಮನೆಯಿತ್ತು. ಅದೇ ಮನೆಗೇ ಈಗ ಚಕ್ರವು ಬಂದಿತ್ತು. ಕಡೆಗೆ ಮಾಧವರಾಯರು ತಿರಸ್ಕಾರ ಬುದ್ಧಿಯಿಂದ ಆಡಿತೋರಿಸಿಥ ಮಾರ್ಗವೇ ಗತಿಯೆಂಬಂತೆ ಬಳವಂತನಿಗೆ ತೋರಹತ್ತಿತು. “ಆದರೆ ಎಮ್ಮೆ ಆಕಳುಗಳನ್ನು ಒತ್ತೀ ಇಟ್ಟುಕೊಳ್ಳುವವರಾರು? ಅವನ್ನು ಮಾರಲಿಕ್ಕೇಬೇಕು! ಮಾರಿದರೆ ಚರಿತಾರ್ಥದ ಸಾಧನವೇ ಕಡಿದುಹೋಗುವದು ಮೇಲೆ ನಮ್ಮ ಚಿಗಪ್ಪ ಗೋವಿಂದರಾಯರು ಕೊಟ್ಟ ಸಾಲದಭಾರವು ಹಾಗೆಯೇ ಉಳಿಯುವದು. ಒಳ್ಳೇದು. ಬಂದದ್ದು ಬರಲಿ. ಈ ಬಡವನನ್ನು ಮುಕ್ತಮಾಡಲೇಬೇಕು. ಮಾಧವರಾಯರಿಗೆ ಮಾತಾಡಲಿಕ್ಕೆ ಬಾಯಿಯಿಲ್ಲದಂತೆ ಅವರ ದುಡ್ಡನ್ನು ಅವರಿಗೆ ಚಲ್ಲಬೇಕು. ಎಮ್ಮೆ ಆಕಳುಗಳನ್ನು ಮಂಗಳವಾರದ ಸಂತೆಯಲ್ಲಿ ಮಾರಿಬಿಡಬೇಕು” ಎಂದು ನಿಶ್ಚಯಿಸಿ ಬಳವಂತನು ರಾಧಾಬಾಯಿಗೂ ಬಸಪ್ಪನಿಗೂ ತನ್ನ ಮನೋಗತವನ್ನು ತಿಳಿಸಿದನು. ಅದನ್ನು ಕೇಳಿ ರಾಧಾಬಾಯಿಗೆ, ಏನೋ ವಿಚಿತ್ರವೆನಿಸಿತು. ಏನು ಮಾತಾಡಬೇಕೆಂಬದು ತಿಳಿಯದೆ ಹೋಯಿತು. ಬಸಪ್ಪನು ಮಾತ್ರ—“ಅಪ್ಪನವರೇ, ಇದೇನು ನೀವು ಹೇಳುವಿರಿ? ನನ್ನ ಸಾಲಕ್ಕಾಗಿ, ನಿಮ್ಮ ದನಕರುಗಳ ಮಾರಾಟವೇ! ಛೇ, ಇದಾಗಕೂಡದು. ನನಗೆ ಬಂದದ್ದು ಬರಲಿ; ನನ್ನ ಮನೆಯ ಸಾಮಾನುಗಳೆಲ್ಲ ಹೋಗಲಿ. ನನಗೆ ಸೆರೆಮನೆಯ ವಾಸವಾದರೂ ಅಡ್ಡಿಯಿಲ್ಲ. ನನ್ನ ಗ್ರಹಚಾರ ತಪ್ಪಿಸಲಿಕ್ಕೆ ನೀವು ಇದ್ದ ಹೊಟ್ಟೆಬಟ್ಟೆಯ ಸಾಧನವನ್ನು ಕಡಿದುಹಾಕಿಕೊಳ್ಳಬೇಡಿರಿ” ಎಂದು ಗದ್ಗದ ಸ್ವರದಿಂದ ನುಡಿದನು.

ಈ ಪ್ರಕಾರ ಅವರೆಲ್ಲರೂ ಚಿಂತಾತುರರಾಗಿ ಕೂತಿರಲು ಅವರ ಮನೆಗೆ ಮಾಧವರಾಯನ ಮಗಳಾದ ನರ್ಮದಾಬಾಯಿಯು ಬಂದಳು.

ನರ್ಮದೆಗೆ ಬಸಪ್ಪನ ಮೇಲೆ ಬಂದ ಪೇಚು ರಂಗೂಬಾಯಿಯಿಂದ ಗೊತ್ತಾಗಿತ್ತು. ಮಾಧವರಾಯರು ಬಳವಂತನ ಸಂಗಡ ಮಾತಾಡುವಾಗ ರಂಗೂಬಾಯಿಯು ನಡುಮನೆಯಲ್ಲಿ ನಿಂತು ಎಲ್ಲಾ ಕೇಳಿಕೊಂಡಿದ್ದಳು. ರಂಗೂಬಾಯಿಗೆ ರಾಧಾಬಾಯಿಯಮೇಲೂ ಬಳವಂತನಮೇಲೂ ಬಹಳ ಸಿಟ್ಟು. ಎಷ್ಟೋ ದಿವಸ ತಮ್ಮ ಮನೆಯಲ್ಲಿದ್ದು ಕಡೆಗೆ ಹೇಳದೆ ಕೇಳದೆ

ಹೋಗಿ ಎರಡನೇ ಕಡೆಗೆ ಮನೆ ಮಾಡಿದ್ದೇ ಇದಕ್ಕೆ ಕಾರಣ. ಕೂಡಲೇ ಅವಳು ಹಿತ್ತಲಕಡೆಗೆ ಹೋಗಿ ತುಲಸೀಕಟ್ಟೆಯ ಮುಂದೆ ಜಪಮಾಡುತ್ತ ಕುಳಿತಿದ್ದ ನರ್ಮದೆಯ ಮುಂದೆ ಎಲ್ಲ ವೃತ್ತಾಂತವನ್ನು ಹರವಿದಳು. ನರ್ಮದೆಯು ಸುಮ್ಮನೆ ಕೂತುಕೊಂಡು ಎಲ್ಲಾ ಕೇಳಿಕೊಂಡಳು. ಏನೂ ಮಾರುತ್ತರ ಕೊಡಲಿಲ್ಲ. ಅವಳ ಕಣ್ಣಲ್ಲಿ ಒಂದು ಅಶ್ರುಬಿಂದುವು ಮಾತ್ರ ಹೊರಸೂಸಿತು. ಆದರೆ ಮೋರೆಯನ್ನು ಇನ್ನೊಂದು ಕಡೆಗೆ ತಿರುಗಿಸಿ ಅವಳು ತನ್ನ ಭಾವವನ್ನು ಅಡಗಿಸಿಕೊಂಡಳು. ಮುಂದೆ ಮಧ್ಯಾಹ್ನವೆಲ್ಲ, ನರ್ಮದೆಯು ಜಡ್ಡಾದವಳಂತೆ ಕೋಣೆಯಲ್ಲಿ ಮಲಗಿಕೊಂಡೇ ಇದ್ದಳು. ಇಳಿಹೊತ್ತಾಗಲು ದೇವರಗುಡಿಗೆ ಹೋಗುವ ನಿಮಿತ್ತದಿಂದ ಅವಳು ರಾಧಾಬಾಯಿಯ ಮನೆಗೆ ಬಂದಳು.

ನರ್ಮದೆಯು ರಾಧಾಬಾಯಿಯ ಮನೆಗೆ ಕ್ವಚಿತ್ತಾಗಿ ಬರುತ್ತಿದ್ದಳು. ಕೆಲಸವಿಲ್ಲದೆ ಅವಳು ಎಂದೂ ಬರುತ್ತಿದ್ದಿಲ್ಲ. ಅವಳನ್ನು ಕಂಡಕೂಡಲೇ, ರಾಧಾಬಾಯಿಯು "ಇದೇನು? ನರ್ಮದಾ, ಬಡವರಮನೆಗೆ ಭಾಗಿರಥಿ ಬಂದಂತೆ ಬಂದೆಯಲ್ಲ. ಬಾ, ಕುಳಿತುಕೋ" ಎಂದಳು. ಸ್ವಲ್ಪ ಹೊತ್ತು ಉಪಚಾರದ ಮಾತುಗಳಾದವು. ಆದರೆ ನರ್ಮದೆಯು ಬಂದ ಕೆಲಸದ ಸುದ್ದಿಯನ್ನೇ ತೆಗೆಯಲಿಲ್ಲ. ಹೀಗೆ ಎಷ್ಟೋಹೊತ್ತು ಮಾತುಕಥೆಗಳಾದ ಮೇಲೆ, ನರ್ಮದೆಯು "ಈ ಬಸಪ್ಪನ ಕೆಲಸವೇನಾಯಿತು?" ಎಂದು ಕೇಳಿದಳು.

"ಆಗುವದೇನು? ಅವನನ್ನು ದೇವರೇ ಉಳಿಸಬೇಕು. ಮನುಷ್ಯರಿಂದ ಸಾಧ್ಯವಿಲ್ಲ," ಎಂದು ರಾಧಾಬಾಯಿ ಉಸುರ್ಗರೆದಳು.

ಮುಂದೆ ಸ್ವಲ್ಪ ಹೊತ್ತು ಯಾರೂ ಮಾತಾಡಲಿಲ್ಲ. ನರ್ಮದೆಯು ಒಮ್ಮೆ ಬಸಪ್ಪನ ಮೋರೆಯನ್ನೂ ಒಮ್ಮೆ ರಾಧಾಬಾಯಿಯ ಮೋರೆಯನ್ನೂ ನೋಡಹತ್ತಿದಳು. ಆಗ ಬಸಪ್ಪನಿದ್ದದರಿಂದ ಅವಳು ಮಾತಾಡುವದಿಲ್ಲೆಂದು ತಿಳಿದು ರಾಧಾಬಾಯಿಯು— "ಬಸಪ್ಪಾ, ನಿಮ್ಮ ಮನೆಯ ಅಡಿಯಲ್ಲಿ ಚಲೋ ಮಾವಿನ ಹಣ್ಣುಗಳಿದ್ದರೆ ತಕ್ಕೊಂಡು ಬಾ" ಎಂದು ಹೇಳಿ ಅವನನ್ನು ಕಳಿಸಿಕೊಟ್ಟಳು. ಆ ಮೇಲೆ ನರ್ಮದೆಯು "ಈ ಬಸಪ್ಪನನ್ನು ಪಾರುಮಾಡುವ ಹಂಚಿಕೆಯೇನೂ ನಿಮಗೆ ಕಾಣುವದಿಲ್ಲವೇ?!" ಎಂದು ಕೇಳಿದಳು. ಅದಕ್ಕೆ ರಾಧಾಬಾಯಿಯು ಬಳವಂತನ ವಿಚಾರವನ್ನು

ಅವಳಿಗೆ ತಿಳಿಸಿಹೇಳಿದಳು. ಬೆನ್ನುಬಿದ್ದ ಬಡತನವನ್ನು ಸಂಕಟದಿಂದ ಪಾರು ಮಾಡಲಿಕ್ಕೆ ಬಳವಂತನು ತನ್ನ ದಸಕರಗಳನ್ನು ಮಾರಲಿಕ್ಕೆ ಸಿದ್ಧನಾದದ್ದು ಕೇಳಿ ನರ್ಮದೆಗೆ ಬಳವಂತನ ವಿಷಯಕ್ಕೆ ಅತ್ಯಂತ ಆದರವೂ ತನ್ನ ತಂದೆಯ ವಿಷಯಕ್ಕೆ ತಿರಸ್ಕಾರವೂ ನಾಚಿಕೆಯೂ ಒಮ್ಮೆಲೇ ಮನಸ್ಸನ್ನು ಆಕ್ರಮಿಸಿದುವು. ಸ್ವಲ್ಪ ಹೊತ್ತು ಸುಮ್ಮನಿದ್ದು ಆ ಮೇಲೆ ಅವಳು ತನ್ನ ಕಿಸೆಯೊಳಗಿಂದ ಒಂದು ಪಾಕೀಟು ತೆಗೆದು ರಾಧಾಬಾಯಿಯ ಮುಂದಿಟ್ಟಳು. "ಇದೇನು, ಇದೇನು" ಎಂದು ರಾಧಾಬಾಯಿಯು ಅಚ್ಚರಿಯಿಂದ ಕೇಳಲಾಗಿ ಪಾಕೀಟು ತೆರೆದು ಒಳಗಿರುವ ನಾಲ್ಕು ಹಸರುನೋಟಗಳನ್ನು ಬಳವಂತನ ಕೈಯಲ್ಲಿ ಕೊಟ್ಟು—"ಈ ಹಣವನ್ನು ಒಸಪ್ಪನ ದೆಸೆಯಿಂದ ಉಪಯೋಗಿಸಿ ಅವನ ಕಷ್ಟವನ್ನು ದೂರಮಾಡು" ಎಂದು ಹೇಳಿದಳು.

ಇದನ್ನೆಲ್ಲ ನೋಡಿ ಬಳವಂತನಿಗೂ ರಾಧಾಬಾಯಿಗೂ ಬಹಳ ಅಚ್ಚರಿಯುಂಟಾಯಿತು. ಆದರೆ ರೂಪಾಯಿ ತೆಗೆದುಕೊಳ್ಳುವ ಧೈರ್ಯವು ಇಬ್ಬರಿಗೂ ಆಗಲಿಲ್ಲ. ಕಡೆಗೆ ಈ ಸಮಸ್ಯೆಯನ್ನು ಬಿಡಿಸಿಹೇಳಲಿಕ್ಕೆ ನರ್ಮದೆಗೆ ಆಗ್ರಹ ಮಾಡಲಾಗಿ ನರ್ಮದೆಯು ಹೇಳತೊಡಗಿದಳು.

ನಮ್ಮ ತಾಯಿಯು ಸಾಯುವ ಕಾಲದಲ್ಲಿ ರಹಸ್ಯವಾಗಿ ನನ್ನನ್ನು ಹತ್ತಿರ ಕರೆದು—"ನರ್ಮದಾ, ಈ ಕೀಲಿಕೈ ತೆಗೆದುಕೊ. ನನ್ನ ಪೆಟ್ಟಿಗೆಯನ್ನು ತೆರೆದು ಅದರಲ್ಲಿ ನಾನು ಇಷ್ಟು ದಿವಸ ಕೂಡಿಹಾಕಿರುವ ನಾನೂರು ರೂಪಾಯಿಗಳನ್ನು ತೆಗೆದುಕೊಂಡು ನಿನ್ನ ಹತ್ತಿರ ಇಟ್ಟುಕೋ. ನಿನ್ನ ಅವಸ್ಥೆಯಂತೂ ಹೀಗಾಯಿತು. ನಿನಗೆ ಕಷ್ಟಕಾಲವು ಬಂದರೆ ಈ ದುಡ್ಡನ್ನು ಉಪಯೋಗಿಸು. ಇಲ್ಲದಿದ್ದರೆ ಇದು ಹಾಗೆಯೇ ನಿನ್ನ ಪೆಟ್ಟಿಗೆಯಲ್ಲಿ ಗುಪ್ತವಾಗಿರಲಿ" ಎಂದು ಹೇಳಿ ಕಣ್ಣೀರು ತಂದಳು. ಇದೆಲ್ಲ ನೆನಪಾದಾಗೆಲ್ಲ ನನಗೆ ಅಳುವು ತಡೆಯುವದಾಗುವದಿಲ್ಲ," ಎಂದು ಹೇಳುತ್ತ ನರ್ಮದೆಯು ಕಣ್ಣೊರಿಸಿಕೊಂಡಳು "ಇಷ್ಟು ದಿವಸ ನನಗೆ ಈ ದುಡ್ಡು ಉಪಯೋಗಿಸುವ ಪ್ರಸಂಗವು ಒದಗಿದ್ದಿಲ್ಲ. ಈಗ ಮಾತ್ರ ಬಸಪ್ಪನ ಮೇಲೆ ಬಂದ ಆಪತ್ತನ್ನು ನೋಡಿ ನನಗೆ ಸುಮ್ಮನೆ ಕೂಡ್ರದಂತಾಯಿತು. ಅದರಲ್ಲಿಯೂ ಬಳವಂತರಾಯನು ಅವನ ಹಣಕ್ಕೆ ಹೊಣೆಗಾರನಾಗುವನೆಂದು ಕೇಳಿದೆ. ಅದರಿಂದ ನನಗೆ ಬಹಳ ನಾಚಿಕೆಯುಂಟಾಯಿತು. ನೀವು ಈ ಹಣವನ್ನು ಸ್ವೀಕರಿಸಿ

ಇದರ ಯೋಗ್ಯ ವ್ಯವಸ್ಥೆಯನ್ನು ಮಾಡಬೇಕು.'' ಇಷ್ಟು ಹೇಳಿ ನರ್ಮದೆಯು ಸುಮ್ಮನಾದಳು.

ಆಗ ರಾಧಾಬಾಯಿಯೂ ಬಳವಂತನೂ ''ನಿನ್ನ ತಾಯಿಯು ಆಪತ್ಕಾಲದಲ್ಲಿ ಕೊಟ್ಟ ದುಡ್ಡು ನಮಗೇಕಮ್ಮಾ? ಅದೇನೂ ಬೇಡ'' ಎಂದು ಪರಿಪರಿಯಿಂದ ಹೇಳಿ ನೋಡಿದರು. ಆದರೆ ನರ್ಮದೆಯು ಕೊಟ್ಟ ದುಡ್ಡನ್ನು ತಿರುಗಿ ತಕ್ಕೊಳ್ಳಲಿಲ್ಲ.

ಅಷ್ಟರಲ್ಲಿಯೇ ಬಸಪ್ಪನು ಮಾವಿನ ಹಣ್ಣುಗಳನ್ನು ತೆಗೆದುಕೊಂಡು ತಿರುಗಿಬಂದನು. ನರ್ಮದೆಯು ಮಾಡಿದ ಉಪಕಾರವನ್ನು ಕೇಳಿ ಅವನಿಗೆ ಹಿಡಿಸಲಾರದಷ್ಟು ಆನಂದವಾಯಿತು. ಅವನು ''ಅಮ್ಮಾ, ನಿಮ್ಮ ಹೊಟ್ಟೆಯು ತಣ್ಣಗಾಗಲಿ. ದೇವರು ನಿಮಗೆ ಕಲ್ಯಾಣಮಾಡಲಿ. ನಿಮ್ಮಂಥ ದಯೆಯುಳ್ಳ ಜನರು ಇರುವದರಿಂದಲೇ ಈ ಜಗತ್ತು ನಡೆದದೆ. ಮಳೆಬೆಳೆಗಳು ಇಷ್ಟಾದರೂ ಬರುತ್ತವೆ. ಆದರೆ ಇದು ನೋಡಿ. ನಿಮ್ಮ ಹಣವನ್ನು ನಾನೇನೂ ಇಟ್ಟುಕೊಳ್ಳುವನಲ್ಲ. ನಿಮ್ಮ ಋಣದಲ್ಲಿ ನಾನೆಂದಿಗೂ ಉಳಿಯುವದಿಲ್ಲ. ಪೈಗೆ ಪೈ ಕೂಡಿಸಿ ನಾವೆಲ್ಲರೂ ಹೊಟ್ಟೆಯನ್ನಾದರೂ ಕಟ್ಟಿ ನಿಮ್ಮ ದುಡ್ಡು ನಿಮಗೆ ಮುಟ್ಟಿಸುತ್ತೇವೆ.'' ಹೀಗೆ ಅನ್ನುತ್ತ ನೆಲಮುಟ್ಟಿ ನರ್ಮದೆಗೂ ರಾಧಾಬಾಯಿಗೂ ಬಳವಂತರಾಯನಿಗೂ ನಮಸ್ಕಾರ ಮಾಡಿದನು.

ಆ ನಂತರ ರಾಧಾಬಾಯಿಯು ಎಲ್ಲರಿಗೂ ಸ್ವಲ್ಪ ಕಾಫಿಯನ್ನು ಮಾಡಿಕೊಟ್ಟಳು. ಬಸಪ್ಪನ ಮಾವಿನ ಹಣ್ಣುಗಳಂತೂ ಇದ್ದೇ ಇದ್ದವು. ಆ ದಿವಸದ ಉಪಹಾರವು ಎಲ್ಲರಿಗೂ ಅಮೃತದಂತೆ ಸವಿಯಾಗಿ ಆನಂದವನ್ನು ಕೊಟ್ಟಿತು.

ಮರುದಿವಸ ಮುಂಜಾನೆ ಬಳವಂತನೂ ಬಸಪ್ಪನೂ ಹೋಗಿ ಮಾಧವರಾಯರೆದುರಿಗೆ ನಾಲ್ಕು ನೂರರ ನೋಟುಗಳನ್ನಿಟ್ಟು ''ಲೆಖ್ಖಾಚಾರ ಮಾಡಿ ವ್ಯವಹಾರವನ್ನು ಮುಗಿಸಬೇಕು'' ಎಂದು ಹೇಳಿದರು. ಇಷ್ಟು ಬೇಗನೇ ದುಡ್ಡು ತಂದು ಎಣಿಸಿದ್ದನ್ನು ನೋಡಿ ಮಾಧವರಾಯರು ದಂಗುಬಡಿದಂತೆ ಕುಳಿತರು. ಅವರಿಗೆ ತಮ್ಮ ದುಡ್ಡು ಹೆಚ್ಚು ಪ್ರಯಾಸವಿಲ್ಲದೆ ದೊರೆತಬಗ್ಗೆ

ಸ್ವಲ್ಪ ಆನಂದವಾಗಿರಬಹುದು. ಅವರ ಮೋರೆಯ ಮೇಲೆ ನಸುನಗೆಯು ತೋರುತ್ತಿತ್ತು. ಆದರೆ ಆನಂದದ ಸಂಗಡ ಸ್ವಲ್ಪ ನಾಚಿಕೆಯೂ ಸಂಮಿಲಿತವಾಗಿತ್ತು. ತಮ್ಮ ಮನೆಯಲ್ಲಿಯೇ ಕಲಿತು ದೊಡ್ಡವನಾದ ಬಳವಂತನು ತೋರಿಸಿದ ದೊಡ್ಡ ಮನಸ್ಸು, ದಯಾಳುತನ, ಧೈರ್ಯ, ಸಾಹಸ, ಇವೆಲ್ಲಗಳನ್ನು ನೋಡಿ, ಲಜ್ಜೆಯೂ ಚಡಪಡಿಕೆಯೂ ಅವರ ಮನಸ್ಸನ್ನು ಮೊಯ್ದಾಡಿಸಿದವು. ಅವರು ಹೆಚ್ಚಿಗೆ ಮಾತಾಡದೆ 'ಒಳ್ಳೇದು, ಚನ್ನಾಗಿ ಮಾಡಿದಿ.' ಇಷ್ಟೇ ಅನ್ನುತ್ತ ವ್ಯವಹಾರವನ್ನು ಬೇಗನೆ ತೀರಿಸಿ ಅವರಿಗೆ ಅಪ್ಪಣೆಕೊಟ್ಟರು. ನೋಟುಗಳನ್ನು ಒಯ್ದು ಅಟ್ಟದಮೇಲೆ ತಿಜೋರಿಯಲ್ಲಿ ಭದ್ರವಾಗಿಟ್ಟರು.

ಈ ಪ್ರಕಾರ ಹಸುರುನೋಟಗಳು ನಡುಮನೆಯ ಕೋಣೆಯೊಳಗಿನ ಪೆಟ್ಟಿಗೆಯೊಳಗಿಂದ ಅಟ್ಟದ ಮೇಲಿನ ತಿಜೋರಿಗೆ ಪ್ರವಾಸ ಮಾಡಿದವು. ಇಷ್ಟು ಸ್ವಲ್ಪ ದಾರೀ ನಡೆಯಲಿಕ್ಕೆ ಎಷ್ಟು ತ್ರಾಸ! ಎಷ್ಟು ಘಟಾಟೋಪ!

---

೪

## ಬಳವಂತನ ಮೂರ್ತಿಪೂಜೆಯು.



ಬೇಸಿಗೆಯ ವಿರಾಮಕಾಲವು. ಬಳವಂತರಾಯನು ಬಸಪ್ಪನನ್ನು ಮಾಧವರಾಯರ ಕ್ರೂರವಾದ ಹಿಡಿತದೊಳಗಿಂದ ಪಾರು ಮಾಡಿ ನಾಲ್ಕಾರು ತಿಂಗಳುಗಳು ಆಗಿ ಹೋಗಿದ್ದವು. ಬಳವಂತರಾಯನ ಚಿಗಪ್ಪನ ಮಗನಾದ ರಾಮರಾಯನು ತನ್ನ ಹೆಂಡತಿಯಾದ ಶಾರದೆಯನ್ನೂ ಒಂದು ವರ್ಷದ ಗಂಡು ಕೂಸನ್ನು ಕರೆದುಕೊಂಡು ಅಣ್ಣನೂ ಬಾಲ್ಯ ಸ್ನೇಹಿತನೂ ಆದ ಬಳವಂತರಾಯನಲ್ಲಿ ಕೆಲವು ದಿವಸ ಆರಾಮದಿಂದ ಕಾಲಕಳೆಯಲಿಕ್ಕೆ ಬಂದಿದ್ದನು. ಇವರೆಲ್ಲರ ಭೆಟ್ಟಿಗಾಗಿ ಮಾಧವರಾಯರ ಮಗಳಾದ ನರ್ಮದೆಯು ಬಂದಿದ್ದಳು. ರಾಧಾಬಾಯಿಯು ಬಂದ ಅತಿಥಿಗಳ ಸತ್ಕಾರಕ್ಕಾಗಿ ಅಡಿಗೆ ಮನೆ

ಯಲ್ಲಿ ಕಾಫೀ ಮೊದಲಾದ ಉಪಹಾರದ ಸಿದ್ಧತೆಯನ್ನು ಭರದಿಂದ ನಡೆಯಿ ಸಿದ್ದಳು.

ನರ್ಮದೆಯ ಅತ್ತೇಮನೆಯೂ ಶಾರದೆಯ ತವರುಮನೆಯೂ ಒಂದೇ ಊರಲ್ಲಿ – ಮನಸೂರಲ್ಲಿ. ಶಾರದೆಯು ತವರೂರಿಗೆ ಹೋದಾಗೆಲ್ಲ ಮನಸೂರ ಇನಾಮದಾರರ ಗೃಹಕೃತ್ಯದ ಸುದ್ದಿಗಳು ಅವಳ ಕಿವಿಯ ತನಕ ಬಂದು ಮುಟ್ಟುತ್ತಿದ್ದವು. ಆದ್ದರಿಂದ ತನ್ನ ಗಂಡನ ಮನೆಯ ವರ್ತಮಾನವನ್ನು ತಿಳಿದುಕೊಳ್ಳಲಿಕ್ಕೆ ಸೋತ್ಕಂಠಳಾದ ನರ್ಮದೆಯು ಶಾರದೆಯ ಸಂಗಡ ಮಾತಾಡುತ್ತ ನಡುಮನೆಯಲ್ಲಿ ಕುಳಿತಿದ್ದಳು.

ಸ್ವಲ್ಪಹೊತ್ತು ಆ ಮಾತು ಈ ಮಾತು ನಡೆಯಿತು. ನರ್ಮದೆಯು ಶಾರದೆಯ ಮುದ್ದುಮಗನಾದ ಮಧುಕರನನ್ನು ಎತ್ತಿಕೊಂಡು ಅವನಿಗೆ ಲಟಲಟ ಒಂದೇಸವನೇ ಮುತ್ತುಕೊಟ್ಟು ಆಡಿಸುತ್ತಿದ್ದರು. ಆಗ ಶಾರದೆಯು ವ್ಯಸನದಿಂದ ಅಂದದ್ದು – “ ನರ್ಮದಾ, ಎಲ್ಲಾ ದೇವರ ದಯದಿಂದ ನೆಟ್ಟಗಿದ್ದಿದ್ದರೆ ಮಧುಕರನಂಥ ಮೂರುನಾಲ್ಕು ಬಾಲಕರು ನಿನ್ನ ತೊಡೆಯ ಮೇಲೆ ಆಡಬಹುದಾಗಿತ್ತು ! ”

ನರ್ಮದೆ– “ ಆದಕ್ಕೆಲ್ಲ ದೈವಬಲ ಬೇಕವ್ವಾ, ನನ್ನಂಥ ಹತಭಾಗಿನಿಗೆ ಅಂಥ ಸುದೈವನೆಲ್ಲಿಂದ ಬಂದೀತು ?

ಶಾರದೆ– “ ದೈವ, ದೈವ ಎನ್ನುವದು ಹೆಂಗಸರಿಗೆ ಮಾತ್ರ ಇರುವದೇನೇ ? ಗಂಡಸು ಮಾತ್ರ ಸ್ವಚ್ಛಂದವೃತ್ತಿಯಿಂದ ಇರಬಹುದೇ! ಗಂಡನು ಕೈಹಿಡಿದ ಪತ್ನಿಯನ್ನು ಮನೆಯಿಂದ ದೂಡಿ ಧರ್ಮಾಧರ್ಮಗಳ ನಿರ್ಬಂಧವಿಲ್ಲದೆ ಹೊರಗೆ ಅಡ್ಡಾಡಬಹುದೇ ? ಗಂಡಸು ಏನು ಪಾಪವನ್ನು ಮಾಡಿದರೂ ಸಮಾಜವು ಅವನಿಗೆ ದೋಷಕೊಡುವದಿಲ್ಲ. ಅದು ಅವನ ಹೆಂಡತಿಯ ಪೂರ್ವಕರ್ಮದ ಫಲ– ಅವಳ ಗ್ರಹಚಾರ– ಪಾಲಿಗೆ ಬಂದದ್ದನ್ನು ಅನುಭೋಗಿಸಲೇ ಬೇಕು– ಎಂದು ಶುಷ್ಕ ಸಮಾಧಾನವನ್ನು ಹೇಳುವರು. ”

ನರ್ಮದೆ– “ಅದು ಹ್ಯಾಗೇ ಇರಲಿ. ಯಾವದಕ್ಕೆ ಉಪಾಯವಿಲ್ಲವೋ ಅದನ್ನು ಅನುಭವಿಸಿಯೇ ತೀರಬೇಕು. ದೇವರ ಕೃಪಾದೃಷ್ಟಿಯು ನನ್ನ ಮೇಲೆ ಎಂದು ಬೀಳುವದೋ ಬೀಳಲಿ. ಮಾಡುವದೇನು ? ”

ಶಾರದೆ – "ದೇವರ ದೃಷ್ಟಿ ಎಂದು ಹೇಳಬೇಕವ್ವಾ? ನನಗಂತೂ ನಿನ್ನ ಗಂಡನ ಇತ್ತ್ತಕಡೆಯ ರೀತಿ ನಡಾವಳಿಗಳನ್ನು ನೋಡಿ ಎದೆಯಲ್ಲಿ ಹೇಗೋ ಅನಿಸುತ್ತದೆ."

ನರ್ಮದೆ–ಗಾಬರಿಯಾಗಿ–"ಯಾಕೆ! ಮತ್ತೇನು–ಅನರ್ಥವು ನಡೆದಿದೆ ಯವ್ವಾ? ನನ್ನ ಗೋಳಿನ ಬಟ್ಟಲು ಇನ್ನೂ ತುಂಬಿಲ್ಲವೇ?"

ಶಾರದೆ (ಕಣ್ಣಿನಲ್ಲಿ ನೀರು ತಂದು)– 'ಏನು ಹೇಳಲಿ? ಇತ್ತ ಕಡೆಗೆ ಅಪ್ಪಾಸಾಹೇಬನ ಸ್ವಚ್ಛಂದವೃತ್ತಿಯು ಮೇರೆದಪ್ಪಿದೆ. ಅವನು ಈಗ ಒಬ್ಬ ಕ್ರೈಸ್ತ ಬಾಲೆಯ ಮೋಹಜಾಲದಲ್ಲಿ ಸಿಲುಕಿದ್ದಾನೆ. ಅವಳ ಹೆಸರು ಮಿಸ್ ಫ್ಲೋರಾ, ಮಿಸ್ ಫ್ಲೋರಾ ೨೨ ವರ್ಷದವಳಿದ್ದು ಇನ್ನೂ ಅವಿವಾಹಿತಳು. ಸಣ್ಣ ಹುಡುಗಿಯರಂತೆ ಅವಳ ಜಿಗಿದಾಟವೇನು! ಕುಣಿದಾಟವೇನು! ಒನಪು ಒಯ್ಯಾರಗಳೇನು! ಅಪ್ಪಾಸಾಹೇಬನು ಮುಂಜಾನೆ ಸಂಜೆ, ಅವಳ ಮನೆಯಲ್ಲಿಯೇ ಇದ್ದು ದಿನಾಲು ಅವಳನ್ನು ಮೋಟಾರಿನಲ್ಲಿ ವಾಯುಸೇವ ನಕ್ಕಾಗಿ ಕರೆದುಕೊಂಡು ಹೋಗುತ್ತಾನೆ. ಈಗಾಗಲೇ ಮನಸೂರ ಜನ ರಂತೂ ಅಪ್ಪಾಸಾಹೇಬನ ವಿಷಯಕ್ಕೆ ಬೇಕಾದಹಾಗೆ ಆಡಿಕೊಳ್ಳಹತ್ತಿದ್ದಾರೆ. ಅಂತೂ ಅಪ್ಪಾಸಾಹೇಬನು ಇನಾಮದಾರರ ಮನೆತನಕ್ಕೆಲ್ಲ ಮಶಿಹಚ್ಚಿ ದ್ದಾನೆನ್ನಲಿಕ್ಕೆ ಅಡ್ಡಿಯಿಲ್ಲ."

ಇದನ್ನೆಲ್ಲ ಕೇಳಿ ನರ್ಮದೆಯ ಕಣ್ಣುಗಳು ನೀರಿನಿಂದ ತುಂಬಿ ಬಂದವು. ಇದನ್ನು ನೋಡಿ ಶಾರದೆಯು ತಾನು ಏಕೆ ಇದನ್ನೆಲ್ಲ ಹೇಳಿದೆನೋ ಎಂದು ನೊಂದುಕೊಂಡಳು. ಸ್ವಲ್ಪ ಹೊತ್ತಾದ ಮೇಲೆ ಆಕೆ ಆ ಪ್ರಸ್ತಾಪವನ್ನು ಬಿಟ್ಟು ತನ್ನ ಬಾಳುವೆಯ ಬೇರೆ ಬೇರೆ ಆನಂದದಾಯಕ ಪ್ರಸಂಗಗಳನ್ನು ಎತ್ತಿ ನರ್ಮದೆಗೆ ತನ್ನ ದೈವಗೇಡಿತನದ ಸ್ವಲ್ಪ ವಿಸ್ಮರಣವಾಗುವಂತೆ ಮಾಡಿ ದಳು.

ಇಷ್ಟರಲ್ಲಿ ಉಪಹಾರದ ಸಿದ್ಧತೆಯಾಗಿ ಶಾರದೆಯೂ ನರ್ಮದೆಯೂ ಪಡಸಾಲೆಯಲ್ಲಿ ಹೋಗಿ ಎಲ್ಲರ ಸಂಗಡ ಕಾಫೀ ತಕ್ಕೊಳ್ಳಲಿಕ್ಕೆ ಕೂತು ಕೊಂಡರು. ಶಂಕರಪುರದ ಮಾವಿನಹಣ್ಣುಗಳು ಬಹಳ ಪ್ರಸಿದ್ಧ. ಗಂಗಾ ಬಾಯಿಯು ಅವುಗಳನ್ನೂ ಹೆಚ್ಚಿ ತಂದು ಎಲ್ಲರಿಗೂ ಒಂದೊಂದು ತಟ್ಟೆ

ಯಲ್ಲಿ ಕೊಟ್ಟಳು. ಬಳವಂತರಾಯನು ಬಹಳ ಸುಸಂಸ್ಕೃತ ಮನಸ್ಸುಳ್ಳ ವನು. ಅವನ ಸ್ವಭಾವವು ಬಹಳ ಗಂಭೀರ. ಅವನ ವಿಚಾರಗಳು ಬಹಳ ಪ್ರಗಲ್ಭ. ಅವನು ಮುಂಜಾನೆಯ ಅಥವಾ ಸಾಯಂಕಾಲದ ಉಪಹಾರದ ವೇಳೆಯಲ್ಲಿ ಯಾವದಾದರೊಂದು ಒಳ್ಳೇ ವಿಷಯವನ್ನು ಎತ್ತಿ ಸುಲಲಿತ ವಾಗಿ ಅದರ ಊಹಾಪೋಹವನ್ನು ಮಾಡಿ ಶಿಕ್ಷಣದ ಲಾಭವನ್ನು ಪಡೆಯದ ಹೆಣ್ಣುಮಕ್ಕಳಿಗೆ ಸ್ವತಂತ್ರವಾಗಿ ವಿಚಾರ ಮಾಡಲಿಕ್ಕೆ ಹಚ್ಚುತ್ತಿದ್ದನು. ಇದು ರಾಮರಾಯನಿಗೆ ಚನ್ನಾಗಿ ಗೊತ್ತು. ಅವನು ಬಹಳ ವಿನೋದ ಸ್ವಭಾವವುಳ್ಳವನು. ನಡುನಡುವೆ ಮಾರ್ಮಿಕ ಪ್ರಶ್ನೆಗಳನ್ನು ಹಾಕಿ ಬಳ ವಂತರಾಯನ ವಾಕ್ಪ್ರವಾಹಕ್ಕೆ ಹೆಚ್ಚು ಹೆಚ್ಚು ಚಾಲನೆಯನ್ನು ಕೊಡು ತ್ತಿದ್ದನು.

ಈ ದಿವಸ ಒಂದು ಸಂಗತಿಯು ಸಂಭವಿಸಿತ್ತು. ಬೆಳಗುಮುಂಜಾನೆ ನಾಲ್ಕೂವರೆ ಘಂಟೆಗೆ ರಾಮರಾಯನಿಗೆ ಎಚ್ಚರಿಕೆಯಾಯಿತು. ಸಮೀಪ ದಲ್ಲಿ ಬಳವಂತರಾಯನ ಹಾಸಿಗೆಯ ಕಡೆಗೆ ನೋಡಲಾಗಿ ಬಳವಂತರಾಯನೇ ಇದ್ದಿಲ್ಲ. ಹದಿನೈದು ಇಪ್ಪತ್ತು ನಿಮಿಷಗಳ ವರೆಗೆ ಅವನು ಬರಬಹುದೆಂದು ಹಾದೀ ನೋಡಿದನು. ಆದರೂ ಬಳವಂತನು ಬರಲಿಲ್ಲ. ಆ ಮೇಲೆ ರಾಮರಾಯನು ಹೊರಗೆ ಹೋಗಿ ನೋಡಲು ಎದುರಿನ ಕೋಣೆಯಲ್ಲಿ ದೀಪವು ಕಾಣಿಸಿತು. ಅಲ್ಲಿಗೆ ಹೋಗಿ ನೋಡಲು ಅಲ್ಲಿ ಬಳವಂತನು ಪದ್ಮಾಸನವನ್ನು ಹಾಕಿ ಕೊಂಡು ಧ್ಯಾನಸ್ಥನಾಗಿ ದೇವರ ಮುಂದೆ ಕುಳಿತಿದ್ದನು. ಆ ಕೋಣೆಯಲ್ಲಿ ಒಂದು ದೇವರಮಂಟಪ; ಅದರಲ್ಲಿ ಎರಡು ಸುಂದರವಾದ ದೇವರ ಮೂರ್ತಿ ಗಳು; ಒಂದು ರಾಮನದು ಮತ್ತೊಂದು ಕೃಷ್ಣನದು. ಗೋಡೆಗಳ ಮೇಲೆ ಶಂಕರಾಚಾರ್ಯ, ರಾಮದಾಸ, ವಿದ್ಯಾರಣ್ಯ, ರಾಮಕೃಷ್ಣ, ಟಿಳಕ, ಗಾಂಧಿ ಮೊದಲಾದ ಮಹಾತ್ಮರ ಮತ್ತು ಸಾಧುಸಂತರ ಭಾವಪಟಗಳು. ಅವುಗಳ ಮೇಲ್ಭಾಗಕ್ಕೆ ಭಗವದ್ಗೀತೆಯೊಳಗಿನ ಸುಂದರವಾದ ವಾಕ್ಯಗಳು ಢಾಳಾಗಿ ಬರೆಯಲ್ಪಟ್ಟಿದ್ದುವು. ಕೋಣೆಯಲ್ಲಿ ಸೌಮ್ಯವಾಗಿ ಉರಿಯುವ ಎಣ್ಣೆಯ ದೀಪಗಳೂ, ಸುವಾಸನೆಯನ್ನು ಬೀರುವ ಊದಿನಕಡ್ಡಿಗಳೂ, ಸುಗಂಧ ವನ್ನು ಹರಡುವ ತರತರದ ಪುಷ್ಪಗಳೂ ವಿರಾಜಿಸುತ್ತಿದ್ದುವು. ಇಂಥ ಶಾಂತ ವಾದ ಸ್ಥಾನದಲ್ಲಿ, ಶಾಂತವಾದ ವೇಳೆಯಲ್ಲಿ ಬಳವಂತನು ಧ್ಯಾನಸ್ಥನಾಗಿ

ಕುಳಿತಿದ್ದನು. ಪೂಜೆಯು ಸೂರ್ಯೋದಯದ ವರೆಗೆ ಹಾಗೇ ನಡೆಯಿತು. ರಾಮೂ ಆಗ ಮಾತ್ರ ಬಳವಂತನನ್ನು ತಡೆಯಲಿಲ್ಲ. ಮುಂದೆ ಬಳವಂತನು ತನ್ನ ಆಕಳಗಳನ್ನು ಹಿಂಡಿಕೊಳ್ಳುವದು, ಹಾಲನ್ನು ಮುಚ್ಚಿದ ಪಾತ್ರೆಗಳಲ್ಲಿ ಹಾಕಿ ನಿತ್ಯದ ಗಿರಾಕಿಗಳಿಗೆ ಕಳಿಸಿಕೊಡುವದು, ಲೆಖ್ಖ ಬರೆಯುವದು ಮೊದಲಾದ ಕೆಲಸಗಳಲ್ಲಿ ತೊಡಗಿದ್ದರಿಂದ ರಾಮೂನಿಗೆ ಈ ವಿಷಯವನ್ನು ತೆಗೆಯಲಿಕ್ಕೆ ಅವಕಾಶವಾಗಿದ್ದಿಲ್ಲ. ಸಾಯಂಕಾಲದ ಉಪಹಾರವು ಮುಗಿಯುತ್ತ ಬರಲಾಗಿ ಅವನು ಬಳವಂತನಿಗೆ-"ಏನು ಗೌಳಿಮಹಾರಾಜ, ನೀನು ಇತ್ತಕಡೆಗೆ ಸಾಧುಮಹಾರಾಜರ ಸೋಗುಹಾಕಿದಂತೆ ಕಾಣುತ್ತದೆ. ನೀನು ರಾವಣಸಂನ್ಯಾಸಿಯೋ? ಅರ್ಜುನಸಂನ್ಯಾಸಿಯೋ?"ಎಂದುಕೇಳಿದನು. ಈ ಪ್ರಶ್ನೆಯನ್ನು ಕೇಳಿ ಗಂಗಾಬಾಯಿಯು ಹೊರತಾಗಿ ಎಲ್ಲರೂ ಅಚ್ಚರಿಗೊಂಡರು. ಆ ಮೇಲೆ ರಾಮೂನು ಮುಂಜಾನೆ ತಾನು ಕಣ್ಣಾರೆ ಕಂಡದ್ದನ್ನು ವಿವರಿಸಿ ಹೇಳಲು, ಶಾರದೆಯು ಆಶ್ಚರ್ಯದಿಂದ ಕೇಳಿದಳು-"ಇದೇನು ಭಾವನವರೇ, ನೀವು ನಾಸ್ತಿಕರು ಹೋಗಿ ಆಸ್ತಿಕರು ಆದದ್ದೆಂದು?" ಆಗ ಬಳವಂತನು—"ನಾನು ಹಿಂದಕ್ಕೆ ನಾಸ್ತಿಕನಿದ್ದದ್ದೇನೋ ನಿಜ. ಆದರೆ ಇತ್ತೀಚೆಗೆ ಭಗವದ್ಗೀತೆಯನ್ನೂ ವಿವೇಕಾನಂದನ ಗ್ರಂಥಗಳನ್ನೂ ಓದಿಕೊಂಡ ಮೇಲೆ ನನಗೆ ನಿಜವಾದ ದೇವರಪೂಜೆಯ ಸ್ವರೂಪವೂ ಮಹತ್ವವೂ ತಿಳಿಯಹತ್ತಿವೆ. ನಾನು ಸಾಧುವೂ ಅಲ್ಲ, ಸನ್ಯಾಸಿಯೂ ಅಲ್ಲ. ನಾನೊಬ್ಬ ಸಾಧಕನು ಮಾತ್ರ."

ನರ್ಮದೆಯು— "ಅಣ್ಣಾ, ನೀನು ಹಿಂದಕ್ಕೆ ನಮ್ಮ ಮನೆಯಲ್ಲಿದ್ದಾಗ ದೇವರಪೂಜೆಯನ್ನು ನೋಡಿ ಎಷ್ಟೊಂದು ನಗುತ್ತಿದ್ದಿ. ನಮ್ಮ ತಂದೆಯು ಅನೇಕ ದೇವರನ್ನು ದೊಡ್ಡ ತಾಬಾಣದಲ್ಲಿಟ್ಟು ಅಭಿಷೇಕ ಮಾಡಹತ್ತಲು—"ಇದು ನೋಡು, ದೇವರ ಪರೇಡು ನಡೆದದೆ! ದೇವರನ್ನು ಹೇಗೆ ಸಾಲಾಗಿ ನಿಲ್ಲಿಸಿದ್ದಾನೆ! ಈಗ ಈ ದೇವರುಗಳು ಅಣ್ಣನ ಕೈಯಲ್ಲಿ ಶಿಕ್ಕು ಹೇಗೆ ಕೂಡ್ರು ಅಂದರೆ ಕೂಡ್ರು, ನಿಲ್ಲು ಅಂದರೆ ನಿಲ್ಲು-ನಡೆಸಿವೆ" ಎಂದು ಮೊದಲಾಗಿ ಪೂಜೆಯನ್ನು ಅಣಗಿಸುತ್ತಿದ್ದಿ ಇಂಥಾ ನೀನು ಈಗ ತಾನು ತಾನು ದೇವಪೂಜೆಯನ್ನು ಮಾಡುವದೆಂದರೇನು? ಆಗಿನ ನಿನ್ನ ವಿಚಾರಗಳು ಈಗ ಎಲ್ಲಿ ಹೋದವು?" ಆಗ ಇವರೆಲ್ಲರ ಪ್ರಶ್ನಗಳನ್ನೂ

ಸಂಶಯಗಳನ್ನೂ ಧ್ಯಾನದಲ್ಲಿ ತಂದುಕೊಂಡು ಸ್ವಲ್ಪ ಹೊತ್ತು ವಿಚಾರಿಸಿ ಬಳವಂತನು ಸಾವಕಾಶವಾಗಿ ಹೇಳಲಿಕ್ಕೆ ಆರಂಭಮಾಡಿದನು. ಅವನು ಅಂದದ್ದು.—

"ಪ್ರಚಲಿತ ಸಾಂಪ್ರದಾಯಿಕ ಪೂಜಾಪದ್ಧತಿಯೇನೂ ನನ್ನ ಮನಸ್ಸಿಗೆ ಬರುವದಿಲ್ಲ. ಆದರಿಂದ ಪೂಜಕನ ಮನಸ್ಸಿನ ಮೇಲೆ ಆಗುವ ಸಂಸ್ಕಾರಗಳು ಬಹಳ ಕಡಿಮೆ. ನಿತ್ಯದ ದೇವಪೂಜೆಯಿಂದ ಮನಸ್ಸು ಶಾಂತವಾಗಬೇಕು. ಅದರಲ್ಲಿ ಶಕ್ತಿಯ ಸಂಚಾರವಾಗಬೇಕು. ಮನಸ್ಸಿನ ಪಾಪಪ್ರವೃತ್ತಿಗಳೆಲ್ಲ ಅಳಿದು ಹೋಗಿ ಸತ್ಕಾರ್ಯಗಳ ಕಡೆಗೆ—ಭಗವತ್ಕಾರ್ಯಗಳ ಕಡೆಗೆ ನಿಷ್ಕಾಮ ಸಮಾಜಸೇವೆ ಇಲ್ಲವೆ ರಾಷ್ಟ್ರಸೇವೆಯ ಕಡೆಗೆ ಅದು ಭರದಿಂದ ಹರಿಯ ಹತ್ತಬೇಕು. ಪೂಜೆ ಮಾಡುತ್ತ ಹೋದಂತೆ, ಅರ್ಚಕನ ಸ್ವಭಾವವು ರೂಪಾಂತರ ಹೊಂದಬೇಕು. ಸ್ವಾರ್ಥಬುದ್ಧಿ, ಭಯ, ಸಿಟ್ಟು, ದ್ವೇಷ ಮೊದಲಾದ ದುಷ್ಟವಿಕಾರಗಳು ಪೂಜಾವಿಧಿಯಿಂದ ಕಮರಿಹೋಗಿ ಅವುಗಳ ಬದಲಾಗಿ, ಪರಹಿತಬುದ್ಧಿ, ನಿರ್ಭಯತೆ, ಅಚಲವಾದ ಶಾಂತಿ, ವಿಶ್ವಪ್ರೇಮ ಮೊದಲಾದ ಸದ್ಭಾವನೆಗಳು ಪುಷ್ಟಿಹೊಂದಿ ಬೆಳೆಯುತ್ತ ಹೋಗಬೇಕು. ಅಂದರೇ ಪೂಜಾವಿಧಿಯು ಸಾರ್ಥಕವಾದೀತು. ಪೂಜೆಯಿಂದ ಮನೋಬಲವೂ, ಮನಃಶುದ್ಧಿಯೂ ಬೆಳೆಯದಿದ್ದರೆ ಆ ಪೂಜೆಯು ವ್ಯರ್ಥ ಈ ದೃಷ್ಟಿಯಿಂದ ಪ್ರಚಲಿತ ಪೂಜಾಪದ್ಧತಿಯನ್ನು—ಪಂಚೋಪಚಾರ ಅಥವಾ ಷೋಡಶೋಪಚಾರ ಪೂಜಾಪದ್ಧತಿಯನ್ನು ಪರೀಕ್ಷಿಸಿ ನೋಡಿದರೆ ಅದು ಕೇವಲ ಹೊರಗಿನ ಆಡಂಬರದ ಒಯ್ಯಲಾಟಕ್ಕೆ ಇಳಿದು ಹೋಗಿದೆಯೆಂದು ಬಹಳ ವಿಷಾದದಿಂದ ಹೇಳಬೇಕಾಗುತ್ತದೆ. ಸಧ್ಯದ ಪೂಜಾಕ್ರಮದಲ್ಲಿ ದೇವರೆಷ್ಟು? ಅವರ ಸಂಖ್ಯೆಗೆ ಏನಾದರೂ ಆಳತೆಯಿದೆಯೇ? ಅನೇಕ ದೇವರಾದ ಮೇಲೆ ಅವರವರ ತಾರತಮ್ಯದ ಘಟಾಟೋಪವು ಗಂಟುಬಿದ್ದಿದೆ. ದೇವರೆಂದರೆ ನಮ್ಮಂತೆ ಎಲ್ಲ ಸುಷ್ಟದುಷ್ಟ ಮನೋವಿಕಾರಗಳಿಂದ ಕೂಡಿದ ಒಬ್ಬ ಮನುಷ್ಯನೆಂದು ತಿಳಿದು ನಾವು ಅವನ ಉಪಚಾರ ಮಾಡುತ್ತೇವೆ. ದೇವರಿಗೆ ಪಾದ್ಯಬೇಕು; ಸ್ನಾನಬೇಕು; ಯಜ್ಞೋಪವೀತಬೇಕು ;ವಸ್ತ್ರಗಳು ಬೇಕು; ಗಂಧಾಕ್ಷತೆಗಳು ಬೇಕು; ಉಣ್ಣಲಿಕ್ಕೆ ಸುಗ್ರಾಸಭೋಜನಬೇಕು; ತಾಂಬೂಲ ಬೇಕು; ಶಯನಬೇಕು; ರಾತ್ರೀ ಮಲಗುವಾಗ ಶುಂಠೀಕಷಾಯಸಹ

ಬೇಕು. ಪೂಜೆಯಾದರೆ ದೇವರಿಗೆ ಇವೆಲ್ಲ ಸಾಮಗ್ರಿಗಳನ್ನು ಒದಗಿಸಿ ಅವನಿಗೆ ಅರ್ಪಿಸಿ ಅವನ ನೈವೇದ್ಯವೆಂದು ಎಲ್ಲರೂ ಕೂಡಿ ಸಮಾರಾಧನವಾಗಿ ಹೊಡೆಯುವದು. ಪೂಜಾಸಾಧನಗಳಲ್ಲಿ ಏನಾದರೂ ಕಡಿಮೆಬಿದ್ದರೆ ಅಥವಾ ಪೂಜಾಕ್ರಮದಲ್ಲಿ ಸ್ವಲ್ಪ ವ್ಯತ್ಯಾಸವಾದರೆ ದೇವರಿಗೆ ಸಿಟ್ಟು; ಅರ್ಚಕನ ಅವಸ್ಥೆ ಮುಗಿಯಿತೆಂದು ಹೇಳಬೇಕು. ದೇವರಿಗೆ ಕೊಡಬೇಕಾದದ್ದನ್ನೆಲ್ಲ ಕೊಟ್ಟರೆ ಅವನಿಗೆ ನಮ್ಮ ಮೇಲೆ ಪ್ರೀತಿ; ಇಲ್ಲದಿದ್ದರೆ ನಮ್ಮ ಮೇಲೆ ಅವನ ದ್ರೋಹವು ಕಟ್ಟಿಟ್ಟದ್ದೇ. ಇತ್ಯಾದಿ ದೇವರ ಕಲ್ಪನೆಗಳಿಂದ ಅರ್ಚಕನ ಆತ್ಮೋನ್ನತಿ ಹೇಗಾಗಬೇಕು?"

ನರ್ಮದೆಯು—"ಅದೇಕೆ, ಅಣ್ಣಾ, ಪೂಜೆಯಲ್ಲಿ ಮಂತ್ರ ಶ್ಲೋಕಗಳನ್ನು ಅನ್ನುವದಿಲ್ಲವೇ? ದೇವರಿಗೆ ಪ್ರಾರ್ಥನೆ ನಮಸ್ಕಾರಗಳನ್ನು ಮಾಡುವದಿಲ್ಲವೇ? ಪೂಜೆಯೆಂದರೆ ಕೇವಲ ಕೆಲವು ಉಪಚಾರಗಳಷ್ಟೇ ಏನು?" ಎಂದು ಆಕ್ಷೇಪಿಸಿದಳು.

ಬಳವಂತನು—"ಹೌದು,ಹೌದು,ನೀನು ಒಳ್ಳೇ ನೆನಪು ತೆಗೆದಿ. ನಾನು ಮಂತ್ರಗಳ ಹಾಗೂ ಶ್ಲೋಕಗಳ ವಿಷಯವನ್ನೇ ಮರೆತು ಬಿಟ್ಟಿದ್ದೆ. ಮಂತ್ರಗಳನ್ನು ಎಷ್ಟು ಜನರು ಅರ್ಥಮನನಪೂರ್ವಕವಾಗಿ ಅನ್ನುತ್ತಾರೆ? ವೇದಮಂತ್ರಗಳ ಅರ್ಥವು ಎಷ್ಟು ಜನರಿಗೆ ತಿಳಿಯುತ್ತದೆ? ಸಾಮಾನ್ಯಜನರು ಮಂತ್ರಗಳನ್ನು ಅನ್ನುವಾಗ ಮಂತ್ರಾರ್ಥವು ಅವರ ಮನಸ್ಸಿಗೆ ಹತ್ತುವ ಸಂಭವವಿದೆಯೇ? ಶ್ಲೋಕಗಳ ಅರ್ಥವಾದರೂ ತಿಳಿಯಬಹುದೇ? ಒಂದು ವೇಳೆ ಕೆಲವರಿಗೆ ತಿಳಿದರೂ ಆ ಶ್ಲೋಕಗಳಲ್ಲಿ ಉಪಚಾರಸಾಧನಗಳ ವರ್ಣನೆಯೂ, ದೇವರ ಸ್ವರೂಪದ ಸಾಂಪ್ರದಾಯಿಕ ವರ್ಣನೆಯೂ ಬಹಳವಾಗಿ ತುಂಬಿದ್ದು ಅಂತಃಕರಣವನ್ನು ಕರಗಿಸಿ ನೀರುಮಾಡಿ ಅದನ್ನು ಪರಮೇಶ್ವರನಲ್ಲಿ ಲೀನಮಾಡಿಸುವಂಥ ಪ್ರಾರ್ಥನಾತ್ಮಕ ಭಾಗವು ಎಷ್ಟಿರುತ್ತದೆ? ಈಗಿನ ಪೂಜೆಯೆಂದರೆ—ಗಂಧಾಕ್ಷತೆಗಳ ಸಿದ್ಧತೆಯು; ಅರ್ಥಜ್ಞಾನವಿಲ್ಲದೆ ಮನಸ್ಸನ್ನು ಎತ್ತ ಬೇಕಾದತ್ತ ಹರಿಯಗೊಡುತ್ತ ಮಂತ್ರಗಳನ್ನೂ ಶ್ಲೋಕಗಳನ್ನೂ ಪಟಪಟ ಅನ್ನುವದು, ದೇವರುಗಳಲ್ಲಿ ಅನೇಕ ತರಗತಿಗಳನ್ನು ಕಲ್ಪಿಸಿ ಆ ತಾರತಮ್ಯದ ಪ್ರಕಾರ ಅನೇಕ ಉಪಚಾರಗಳನ್ನು ಸಲ್ಲಿಸುತ್ತ ಹೋಗುವದು; ಮನುಷ್ಯಪ್ರಾಣಿಗಳಿಗೆ ಎಣ್ಣೆ ತುಪ್ಪಗಳು ಸಿಗದಿದ್ದರೂ

ಅಡ್ಡಿಯಿಲ್ಲ, ದೇವರಿಗೆ ನೂರಾರು ತುಪ್ಪದ ದೀವಿಗೆಗಳಿಂದ ಬೆಳಗುವದು; ಮೇಲೆ ಬಡವರೂ ಶ್ರೀಮಂತರೂ ತಮ್ಮ ದ್ರವ್ಯಾರ್ಜನಶಕ್ತಿಯ ವಿಚಾರ ವಿಲ್ಲದೆ ದೇವರ ನೈವೇದ್ಯವೆಂದು ಅನೇಕಾನೇಕ ಭಕ್ಷ್ಯಗಳನ್ನು ಸಿದ್ಧಪಡಿಸಿ ಪ್ರಸಾದದ ನೆವದಿಂದ ಸವಿದು ಜಿಹ್ವಾಲೌಲ್ಯವನ್ನು ತೀರಿಸಿಕೊಳ್ಳುವದು. ಇವುಗಳನ್ನು ಬಿಟ್ಟು ಮನಸ್ಸಿನ ಮೇಲೆ ಪವಿತ್ರಸಂಸ್ಕಾರಗಳನ್ನು ಮಾಡುವ ಧ್ಯಾನ, ಜಪ, ಪ್ರಾರ್ಥನೆ ಇವುಗಳ ಅಂಶವು ಪ್ರಚಲಿತಪೂಜಾ ಕ್ರಮದಲ್ಲಿ ಎಷ್ಟಿದೆಯೆಂಬದನ್ನು ನೀವೇ ಹೇಳಬೇಕು.''

"ಹಾಗಾದರೆ ದೇವರಿಗೆ ಗಂಧ, ಧೂಪ, ದೀಪ ನೈವೇದ್ಯ ಮೊದಲಾ ದವುಗಳು ಬೇಡವೇ?'' ಎಂದು ಶಾರದೆ ಪ್ರಶ್ನೆ ಮಾಡಿದಳು.

ಬಳವಂತನು– "ಇವೇನೂ ದೇವರಿಗೆ ಅವಶ್ಯವಿಲ್ಲ. ಆದರೆ ಮನುಷ್ಯ ನಿಗೆ ಬೇಕಾಗಬಹುದು. ದೇವರ ಮನೆಯು ತುಂಬಾ ಸ್ವಚ್ಛವಾಗಿರಬೇಕು. ಅದರಲ್ಲಿ ನಿರ್ಮಲವಾದ ಹವೆಯೂ ವಿಪುಲವಾದ ಬೆಳಕೂ ಇರಲಿಕ್ಕೆಬೇಕು. ಊದಿನಕಡ್ಡಿ ಧೂಪ ಮೊದಲಾದವುಗಳಿಂದ ಅಲ್ಲಿ ಸುಗಂಧವು ಇಡಿಗಿದ್ದರೆ ಒಳ್ಳೇದು. ಆದರೆ ಇವೇನೂ ಬೇಕೇಬೇಕು– ಎಂದಲ್ಲ. ಸೂರ್ಯಪ್ರಕಾ ಶವು ಕಡಿಮೆಯಾಗಿದ್ದರೆ ಚನ್ನಾಗಿ ಬೆಳಕುಕೊಡುವ ದೀಪವು ಬೇಕು. ಸದ್ಭಾವನೆಗಳನ್ನು ಹುಟ್ಟಿಸಿ ಬಲಿಸಲಿಕ್ಕೆ ಸಾಧುಸಂತರ ಮತ್ತು ಮಹಾ ತ್ಮರ ಭಾವಪಟಗಳು ಬೇಕು. ನಿರಾಕಾರ ದೇವರ ವಿಚಾರವು ಕಲ್ಪನೆಗೆ ನಿಲ್ಲು ಕದ್ದರಿಂದ ಒಂದು ಸರ್ವಾಂಗಸುಂದರವಾದ ದೇವರ ಮೂರ್ತಿಯು ಬೇಕು. ನಾನಂತೂ ಶ್ರೀರಾಮನ ಮೂರ್ತಿಯನ್ನು ಉಪಾಸಿಸುತ್ತೇನೆ. ಶ್ರೀಕೃಷ್ಣನ ಮೂರ್ತಿಯೂ ಅಡ್ಡಿಯಿಲ್ಲ. ಯಾವ ಒಂದು ದೇವರನ್ನು ಇಟ್ಟುಕೊಂಡರೂ ಆ ದೇವರು ನಮ್ಮ ಎಲ್ಲ ಉಚ್ಚಧ್ಯೇಯಗಳ ಮೂರ್ತಸ್ವರೂಪನೆಂದು ನಾವು ಭಾವಿಸಬೇಕು. ಆ ದೇವರು ಎಲ್ಲ ಶಕ್ತಿಯ, ಎಲ್ಲ ಪ್ರೇಮದ, ಎಲ್ಲ ಜ್ಞಾನದ ಕೇಂದ್ರಸ್ಥಾನನೆಂಬ ಕಲ್ಪನೆಯು ಮನದಟ್ಟಾಗಿರಬೇಕು, ದೇವಪೂಜೆ ಯೆಂದರೆ ಉದಾತ್ತಗುಣಗಳ ಚಿಂತನೆಯು; ಧ್ಯೇಯಗುಣಗಳ ಧ್ಯಾನವು; ಆದರ್ಶಜೀವನದ ಗುಣಗಾನವು; ಮನಸ್ಸಿನ ದೋಷಗಳನ್ನೆಲ್ಲ ಸುಟ್ಟು ಸತ್‌ಪ್ರವೃತ್ತಿಗಳನ್ನು ದೃಢಗೊಳಿಸಿ ಆದರ್ಶ ಜೀವನದ ಕಡೆಗೆ ಶಕ್ತಿ ಸರ್ವಸ್ವ ವನ್ನು ಹರಿಬಿಡುವದೇ ನಿಜವಾದ ದೇವಪೂಜೆಯು''

ಇಷ್ಟೆಲ್ಲ ಶಾಂತ ವೃತ್ತಿಯಿಂದ ಕೇಳುತ್ತಿದ್ದ ರಾಮರಾಯನಿಗೆ ಇನ್ನು ತಡೆಯುವದಾಗಲಿಲ್ಲ. ಅವನು ವಿನೋದದಿಂದ ನಗುತ್ತ ನುಡಿದನು–"ಏನು ಕಲಹಂಸ ಸ್ವಾಮಿಗಳೇ, ನಿಮ್ಮ ವಾಕ್ಪಾಟವದಿಂದ ಈ ಮುಗ್ಧ ಬಾಲೆಯರನ್ನೆಲ್ಲ ಮರುಳುಮಾಡಿ ಶಿಷ್ಯೆಯರನ್ನು ಮಾಡಿಕೊಳ್ಳಲು ಪ್ರಯತ್ನ ನಡೆದಂತೆ ಕಾಣುತ್ತದೆ. ಛೀ, ಛೀ, ಇದು ಆಗದ ಮಾತು. ನೈವೇದ್ಯಪ್ರಸಾದಗಳಿಲ್ಲದಿದ್ದರೆ ಅದೆಂತಹಪೂಜೆ! ದೇವರ ಪ್ರಸಾದವೇ ಪೂಜೆಯ ಫಲವು. ಈ ಮಹಾಸ್ವಾಮಿಯ ಮಾತು ಕೇಳಿದರೆ, ನಮ್ಮ ಹೊಟ್ಟೆಯ ಮೇಲೆ ಕಾಲು ಬರುವದೇ ನಿಜ."

"ರಾಮೂ, ನನ್ನ ಪೂಜಾಪದ್ಧತಿಯಿಂದ ರುಚಿರುಚಿ ಅಡಿಗೆಗಳು ಇನ್ನು ಮುಂದೆ ನಿಂತುಹೋಗುವದೆಂದು ನೀನೇನೂ ಅಂಜಬೇಡ ಆದರೆ ಪೂಜೆಗೂ ಸವಿಸವಿ ತಿನಿಸಿಗೂ ಅಪರಿಹಾರ್ಯ ಸಂಬಂಧವು ಮಾತ್ರ ಬೇಡೆಂದು ನನ್ನ ಹೇಳಿಕೆ. ಪೂಜೆಯಾದ ಮೇಲೆ ತಮ್ಮ ತಮ್ಮ ಇಷ್ಟಮಿತ್ರರನ್ನು ಕರೆದುಕೊಂಡು ಊಟಮಾಡಲಿಕ್ಕೊ ಇಲ್ಲವೇ ಉಪಹಾರ ಮಾಡಲಿಕ್ಕೊ ಯಾರು ಬೇಡೆನ್ನುವರು? ಆದರೆ ದೇವರ ನೆವಮಾಡಿ 'ಪ್ರಸಾದ, ಪ್ರಸಾದ' ಎಂದು ಸತ್ಯನಾರಾಯಣ ಪೂಜೆ ಅಥವಾ ಮತ್ತಾವದಾದರೂ ಪೂಜೆ ನಡೆದಲ್ಲಿಗೆ ಹೋಗಿ ನಿಷ್ಕಾರಣ ತಂಡುಲಧ್ವಂಸ ಮಾಡುವದು ದೇವರ ಉಪಾಸನೆಯೆಂದೆನಿಸಿಕೊಳ್ಳಲಾರದೆಂದು ನಾನು ಖಂಡಿತವಾಗಿ ಹೇಳಬಲ್ಲೆನು"

"ನಿನ್ನ ಪೂಜೆಯು ಮುಗಿದಮೇಲೆ ಪ್ರಸಾದ ಸಿಗದಿದ್ದರೆ, ನಿನ್ನ ಪೂಜೆಗೆ ಒಂದು ನೊಣ ಸಹ ಬರಲಿಕ್ಕಿಲ್ಲ." ಎಂದು ರಾಮು ಅಂದಕೂಡಲೆ ಎಲ್ಲರೂ ಖೊಳ್ಳೆಂದು ನಕ್ಕರು.

ಗಂಗಾಬಾಯಿಯು ಮಾತ್ರ– "ಬಳವಂತನು ಹೇಳುವದೇನೋ ಸ್ವಲ್ಪ ಸರಿಯಾಗಿ ಕಾಣುತ್ತದೆ. ಆದರೆ ಸಾವಿರಾರು ವರ್ಷಗಳಿಂದ ಬಂದ ಸಂಪ್ರದಾಯಗಳನ್ನು ಹೇಗೆ ಒಮ್ಮೆಲೇ ಬಿಡಲಿಕ್ಕಾದೀತು?" ಎಂದು ಕೊನೆಯಮಾತನ್ನು ಹೇಳಿದಳು.

ಶಾರದೆಯು– "ಭಾವನವರೇ ನಿಮ್ಮ ಉಪನ್ಯಾಸದಿಂದ ನಮ್ಮ ತಲೆಯಲ್ಲೇನೋ ವಿಪರೀತ ಗಡಿಬಿಡಿಯುಂಟಾಗಿದೆ. ಸಾಕು, ಇನ್ನು ಎಲ್ಲರೂ

ಕೂಡಿ ತಿರುಗಾಡಲಿಕ್ಕೆ ಹೋಗೋಣ ನಡೆಯಿರಿ" ಎಂದು ಅಂದ ಕೂಡಲೆ ಎಲ್ಲರೂ ಅದಕ್ಕೆ ಸಮ್ಮತಿಸಿದರು.

ಗಂಗಾಬಾಯಿಯು ಮಾತ್ರ ಸಂಜೆಯ ಅಡಿಗೆಗೆ ಹೊತ್ತಾಯಿತೆಂದು ಮನೆಯಲ್ಲಿಯೇ ಉಳಿದಳು. ನರ್ಮದೆಯು ಸ್ವಲ್ಪಹೊತ್ತು ಅವರ ಜೊತೆಯಲ್ಲಿ ಅಡ್ಡಾಡಿ ಮನೆಯಲ್ಲಿ ಅಣ್ಣನು ಸಿಟ್ಟು ಮಾಡುವನೆಂದು ಹೇಳಿ ತೀವ್ರವೇ ಮನೆಯ ಹಾದೀ ಹಿಡಿದಳು.

---

## ೫

## 'ಯಾವುದು ಹೆಚ್ಚಿನದು- ಪ್ರೇಮವೋ ? ಧರ್ಮವೋ ?'



"ಪ್ರಿಯೇ ಫ್ಲೋರಾ, ನಾನು ಎಷ್ಟು ಹೊತ್ತಿನಿಂದ ನಿನಗೆ ಸೆರಗೊಡ್ಡಿ ಬೇಡಿಕೊಳ್ಳುತ್ತಿದ್ದೇನೆ. ದಯಮಾಡಿ ನನ್ನ ಕಡೆ ತಿರುಗಿ ಮಾತಾಡು. ನನ್ನ ಮೇಲೆ ಸಿಟ್ಟುಮಾಡಬೇಡ. ನಾನು ನಿನ್ನ ದಾಸಾನುದಾಸನು. ನೀನು ಹೇಳಿದ್ದು ಮಾಡುವೆ. ನನ್ನ ಮೇಲೆ ಸ್ವಲ್ಪ ಕೃಪಾದೃಷ್ಟಿಯನ್ನು ಚಲ್ಲಬಾರದೇ!"

ಈ ಪ್ರಕಾರ ನರ್ಮದೆಯ ಗಂಡನಾದ ಮನಸೂರಿನ ಇನಾಮದಾರ ಅಪ್ಪಾಸಾಹೇಬನು ಅಂಗಲಾಚಿ ಫ್ಲೋರಾಳನ್ನು ಬೇಡಿಕೊಳ್ಳುತ್ತಿದ್ದನು.

ಮಿಸ್ ಫ್ಲೋರಾ ಇವಳು ಒಬ್ಬ ಬೆಡಗಿನ ಕ್ರಿಶ್ಚನ್ ಯುವತಿ. ರೂಪದಿಂದ ಚೆಲುವೆಯೆಂದು ಅನ್ನಬಹುದು. ಆದರೆ ರೂಪಕ್ಕಿಂತ ಅವಳ ಶುಭ್ರ ಮೈಬಣ್ಣವೇ ತರುಣರ ಮನಸ್ಸನ್ನು ಸೆಳೆಯುತ್ತಿದ್ದಿತು. ಅವಳು ಕ್ರಿಶ್ಚನ್ನಳಾದರೂ ಅವಳ ಮುತ್ತಜ್ಜನು ಮರಾಠಾ ಜಾತಿಯಿಂದ ಧರ್ಮಾಂತರ ಹೊಂದಿದ್ದರಿಂದ ಅವಳು ಮರಾಠಾ ಕನ್ನಿಕೆಯಂತೆ ವಸ್ತ್ರ ಧಾರಣ ಮಾಡುತ್ತಿದ್ದಳು. ತರತರದ ಬಣ್ಣದ ತೆಳುವಾದ ಕೃತಕ ರೇಶಿಮೆಯ ಪತ್ತಲಗಳ ಮೇಲೆ ಅವಳಿಗೆ ತುಂಬಾ ಪ್ರೀತಿ. ಅವಳ ಹಸನ್ಮುಖವೂ ನಿರ್ಭಯವಾದ ಮಾತಿನ

ಹಗುರುತನವೂ ಚಿಗರಿಯಂತೆ ಹಾರಾಡುವ ನಡಿಗೆಯೂ ಬಹುಜನರ ಚಿತ್ತವನ್ನು ಅಪಹರಿಸದೆ ಬಿಡುತ್ತಿರಲಿಲ್ಲ.

ಅವಳ ತಂದೆಯಾದ ಡೆವ್ಹಿಡ್‌ರಾಯನಿಗೆ ರೇಲ್ವೆಯಲ್ಲಿ ೨೦೦ರೂಪಾಯಿ ಸಂಬಳದ ಕೆಲಸವಿತ್ತು. ಅವನ ಹೆಂಡತಿ ತೀರಿ ನಾಲ್ಕಾರು ವರ್ಷಗಳಾಗಿದ್ದವು. ಮನೆಯಲ್ಲಿ ಅವನ ಎರಡು ಸಣ್ಣ ಗಂಡು ಮಕ್ಕಳು ಇದ್ದರು. ಇವರೆಲ್ಲರ ಪಾಲನಪೋಷಣದ ಕೆಲಸವೂ ಮನೆತನದ ಎಲ್ಲ ಮೇಲ್ವಿಚಾರಣೆಯೂ ಫ್ಲೋರಾಳಿಗೆ ಒಪ್ಪಿಸಲ್ಪಟ್ಟಿದ್ದುವು. ಡೆವ್ಹಿಡ್‌ರಾಯನು ಮನೆಯಲ್ಲಿ ಇರುವದೇ ಬಹಳ ಕಡಿಮೆ. ಹಗಲು ಕಚೇರಿಯ ಕೆಲಸ. ರಾತ್ರಿ ಕ್ಲಬ್ಬಿನಲ್ಲಿ ಜೂಜಿನಾಟ ಮತ್ತು ಸುರಾಪಾನ. ಹೀಗಾಗಿ ಫ್ಲೋರಾಳ ಸ್ವಚ್ಛಂದ ವರ್ತನಕ್ಕೆ ತುಂಬಾ ಅವಕಾಶವಿತ್ತು.

ಅಪ್ಪಾಸಾಹೇಬನು ನರ್ಮದೆಯನ್ನು ಬಿಟ್ಟ ಮೇಲೆ ಅವನಿಗೆ ಅವನ ಹಿರಿಯರಾದ ನಾರಾಯಣರಾಯರು ಮತ್ತೊಂದು ಮದುವೆಯನ್ನು ಮಾಡಿದ್ದರು. ಆದರೆ ಕರ್ಮಧರ್ಮ ಸಂಯೋಗದಿಂದ ಎರಡನೇ ಹೆಂಡತಿಯು ಸ್ವಲ್ಪ ಮುದುಗಿಯೇ ಗಂಟುಬಿದ್ದಿದ್ದಳು. ಗಂಡನನ್ನು ವಶಮಾಡಿಕೊಳ್ಳುವ ಗುಣಗಳು ಆಕೆಯಲ್ಲಿ ಏನೂ ಇದ್ದಿಲ್ಲ. ಅಪ್ಪಾಸಾಹೇಬನಿಗೂ ಅವಳನ್ನು ಕಂಡರೆ ಹೇಸಿಗೆ. ತನ್ನನ್ನು ಕಂಡರೆ ಗಂಡನಿಗೆ ಆಗದೆಂದು ಅವಳಿಗೆ ತಿಳಿದಿತ್ತು. ಆದರೆ ಅದಕ್ಕೆ ಪ್ರತ್ಯುಪಾಯ ಮಾಡುವಷ್ಟು ಬುದ್ಧಿಯು ಅವಳಿಗಿದ್ದಿಲ್ಲ. ಬಂದದ್ದನ್ನು ಮೂಕ ಕುರಿಯಂತೆ ಸಹನ ಮಾಡುವದು ಅವಳ ಸ್ವಭಾವ ಗುಣವಾಗಿತ್ತು.

ಅಪ್ಪಾಸಾಹೇಬನ ದ್ವಿತೀಯವಿವಾಹವಾದ ವರ್ಷವೇ ಅವನ ಹಿರಿಯರಾದ ನಾರಾಯಣರಾಯರು ತೀರಿಕೊಂಡರು. ಆ ಮೇಲೆ ಜಹಾಗೀರಿನ ಆಡಳಿತವನ್ನು ಅಪ್ಪಾಸಾಹೇಬನು ನೋಡಬೇಕಾಗಿತ್ತು. ಆದರೆ ಕೆಲಸದ ಕಡೆಗೆ ಮನಸ್ಸು ಹಾಕಲಿಕ್ಕೆ ಅವನಿಗೆ ವೇಳೆಯೂ ಇದ್ದಿಲ್ಲ; ಇಚ್ಛೆಯೂ ಇದ್ದಿಲ್ಲ. ಎಲ್ಲವನ್ನೂ ತನ್ನ ತಾಯಿಗೂ ಒಬ್ಬ ಕಾರಕೂನನಿಗೂ ಒಪ್ಪಿಸಿ, ತಾನು ತನ್ನ ಗೆಳೆಯರೊಂದಿಗೆ ಸುಖವಿಲಾಸಗಳಲ್ಲಿ ವೇಳೆಯನ್ನು ಕಳೆಯಹತ್ತಿದ್ದನು. ಮಧ್ಯಾಹ್ನದ ಊಟಕ್ಕೆ ಮಾತ್ರ ಮನೆಗೆ ಬರುತ್ತಿದ್ದನು. ರಾತ್ರಿ

ಹೊರವೂಟವೇ ಬಹಳ. ಹೋಟೆಲುಗಳಲ್ಲಿ ಗೆಳೆಯರಿಗೆ ಉಪಹಾರದ ಪಾರ್ಟಿಗಳು ನಡೆಯುತ್ತಿದ್ದುವು. ಗೆಳೆಯರೆಲ್ಲರೂ ಒತ್ತಟ್ಟಿಗೆ ಸೇರಿ ರಾತ್ರಿ ಹನ್ನೆರಡು ಹೊಡೆಯುವವರೆಗೆ ಜೂಜಿನ ಆಟವನ್ನು ನಡೆಯಿಸುತ್ತಿದ್ದರು. ಮಧ್ಯರಾತ್ರಿಗೆ ಮನೆಗೆ ಪ್ರಯಾಣ.

ಇತ್ತಲಾಗಿ ಅಪ್ಪಾಸಾಹೇಬನಿಗೆ ಫ್ಲೋರಾಳ ಪರಿಚಯವಾಗಿ ಅವಳ ಮೋಹಪಾಶವು ಅವನನ್ನು ತುಂಬಾ ಆವರಿಸಿತ್ತು. ಫ್ಲೋರಾಳೂ ಈ ಪ್ರೇಮಬಂಧನಕ್ಕೆ ಉತ್ತೇಜನ ಕೊಟ್ಟಿದ್ದಳು. ಈ ಪ್ರಕಾರ ಅವರ ಪರಸ್ಪರ ಪ್ರೇಮವು ಬೆಳೆದು ಕಡೆಗೆ ಈಗ ಎಂಟು ದಿವಸಗಳ ಕೆಳಗೆ ಅಪ್ಪಾಸಾಹೇಬನು ಅವಳಿಗೆ ವಿವಾಹದ ಸೂಚನೆಯನ್ನು ಮಾಡಿದ್ದನು. ಫ್ಲೋರಾಳು ತನ್ನ ತಂದೆಯನ್ನು ಕೇಳಿ ತಿಳಿಸುತ್ತೇನೆಂದು ಹೇಳಿ ಇನ್ನೂವರೆಗೆ ಯಾವ ಉತ್ತರವನ್ನೂ ಕೊಟ್ಟಿದ್ದಿಲ್ಲ. ಅವಳ ಮೌನವ್ರತವೂ ಅನಾದರ ಸಹಿತವಾದ ಬಿಗುವಿನ ಮೋರೆಯೂ ಅಪ್ಪಾಸಾಹೇಬನಿಗೆ ತೀವ್ರ ವ್ಯಥೆಯನ್ನುಂಟುಮಾಡಿ ಈ ಪ್ರಕರಣದ ಶಿರೋಭಾಗದಲ್ಲಿ ಹೇಳಿದಂತೆ ಅವನಿಗೆ ಅಂಗಲಾಚಿ ಪ್ರೇಮಭಿಕ್ಷೆಯನ್ನು ಬೇಡಿಕೊಳ್ಳಲಿಕ್ಕೆ ಹಚ್ಚಿದ್ದವು.

ಅಪ್ಪಾಸಾಹೇಬನು ಪ್ರೇಮಯಾಚನೆಯನ್ನು ಮಾಡುತ್ತಿರುವಾಗ ಫ್ಲೋರಾ ತನ್ನ ಮೋರೆಯನ್ನು ಬೇರೆ ಕಡೆಗೆ ತಿರುಗಿಸಿ ಕಿಡಿಕಿಯಲ್ಲಿ ನೋಡುತ್ತ ಕೂತಿದ್ದಳು. ಅವಳ ಮೋರೆಯ ಮೇಲೆ ಕೃತಕ ಕೋಪದ ಚಿಹ್ನಗಳಿದ್ದವು. ಅಪ್ಪಾಸಾಹೇಬನ ಸ್ತೋತ್ರಮಾಲೆಯ ಕಡೆಗೆ ಅವಳ ಪೂರಾ ಲಕ್ಷ್ಯವಿತ್ತು. ಆದರೂ ಏನೂ ಲಕ್ಷ್ಯವಿಲ್ಲದವಳಂತೆ ಕಿಡಿಕಿಯೊಳಗೆ ಕಾಣುವ ಹೂವಿನಗಿಡಗಳ ಕಡೆಗೆ ಶೂನ್ಯದೃಷ್ಟಿಯಿಂದ ನೋಡುತ್ತ ಕೂತಿದ್ದಳು. ಕಡೆಗೆ ಅವನ ಸ್ತುತಿಪಾಠಗಳನ್ನು ಕೇಳಿಕೇಳಿ ಒಮ್ಮೆ—

"ಅಪ್ಪಾಸಾಹೇಬರೇ, ನಿಮ್ಮ ಪ್ರೇಮದ ಬಗ್ಗೆ ನನಗೇನೂ ಸಂಶಯವಿಲ್ಲ. ನಾನು ನನ್ನ ಸ್ವಾಮಿನಿಯಾಗಿದ್ದರೆ ಈ ಹೊತ್ತೇ ನಿಮ್ಮ ಮದುವೆಯಾಗುತ್ತಿದ್ದೆನು. ಆದರೆ ಏನು ಮಾಡುವದು? ದೈವವು ನಮಗೆ ಸ್ವಲ್ಪ ಪ್ರತಿಕೂಲವಾಗಿರುವಂತೆ ಕಾಣುತ್ತದೆ" ಎಂದು ಲಜ್ಜೆಯಿಂದ ನೆಲದಕಡೆಗೆ ನೋಡುತ್ತ ಫ್ಲೋರಾ ಉತ್ತರ ಕೊಟ್ಟಳು.

ಮದುವೆಗೆ ತನ್ನದೇನೂ ಅಡ್ಡಿಯಿಲ್ಲವೆಂಬ ಫ್ಲೋರಾಳ ಆಶ್ವಾಸನವನ್ನು ಕೇಳಿ ಅಪ್ಪಾಸಾಹೇಬನಿಗೆ ಹಿಡಿಸಲಾರದಷ್ಟು ಆನಂದವಾಗಿ ಅವನು ಕುಣಿದಾಡಹತ್ತಿದನು. ಕಡೆಗೆ ಅವನು—" ಪ್ರಿಯೇ, ನನ್ನಂಥ ಧನ್ಯರು ಜಗತ್ತಿನಲ್ಲಿ ಯಾರೂ ಇಲ್ಲ. ಆದರೆ ದೈವವು ಪ್ರತಿಕೂಲವೆಂದು ಅನ್ನುವಿಯಲ್ಲ? ಅದೇಕೆ?" ಎಂದು ಕುತೂಹಲದಿಂದ ಕೇಳಿದನು.

" ನಾನು ತಂದೆಯನ್ನು ಮದುವೆಯ ಸಲುವಾಗಿ ಕೇಳಿದೆ. ಮೊದಲು ಒಂದೆರಡು ದಿವಸ ಅವನು ನನ್ನ ಮಾತನ್ನು ಕಿವಿಯಮೇಲೆಯೇ ಹಾಕಿಕೊಳ್ಳಲಿಲ್ಲ. ಆದರೆ ನಾನು ಬಹಳ ಆಗ್ರಹವನ್ನು ಹಿಡಿಯಲು ಅವನು—" ಫ್ಲೋರಾ, ಅಪ್ಪಾಸಾಹೇಬನು ಹಿಂದೂಧರ್ಮೀಯನು. ಅವನು ಒಂದು ವೇಳೆ ಕ್ರಿಸ್ತೀಧರ್ಮವನ್ನು ಅಂಗೀಕರಿಸಲು ಒಪ್ಪಿದರೆ ಮಾತ್ರ ನಿಮ್ಮಿಬ್ಬರ ಮದುವೆಯಾಗಬಹುದು. ಇಲ್ಲದಿದ್ದರೆ ನಿಮ್ಮಿಬ್ಬರ ಮದುವೆ ಆಗುವದು ಶಕ್ಯವಿಲ್ಲ" ಎಂದು ಖಂಡಿತವಾಗಿ ಹೇಳಿಬಿಟ್ಟನು. ಈ ಮಾತನ್ನು ನಿಮಗೆ ಹೇಗೆ ಹೇಳಲಿ ಅಂತಾ ನಾನು ಈಗ ಒಂದೆರಡು ದಿವಸ ಬಹಳ ಅನುಮಾನಿಸುತ್ತಿದ್ದೆ. ಆದರೆ ನಿಮ್ಮ ಪ್ರೇಮದ ಉತ್ಕಟಸ್ವರೂಪವನ್ನು ನೋಡಿ ಧೈರ್ಯಹೊಂದಿದವಳಾಗಿ ಈ ಹೊತ್ತು ನಿಮಗೆ ಇದ್ದ ಸಂಗತಿಯನ್ನು ಹೇಳಿಬಿಟ್ಟೆ." ಹೀಗೆ ಅಪ್ಪಾಸಾಹೇಬನ ಮುಖಮುದ್ರೆಗಳನ್ನು ಚನ್ನಾಗಿ ನಿರೀಕ್ಷಿಸುತ್ತ ಫ್ಲೋರಾ ನುಡಿದಳು.

ಈ ಮಾತನ್ನು ಕೇಳುತ್ತಲೇ ಇನಾಮದಾರನ ಮೋರೆ ಇಳಿದು ಹೋಯಿತು. "ಹಾಗಾದರೆ ನಿಜವಾಗಿಯೂ ದೈವವು ನಮಗೆ ವಿಘ್ನವನ್ನು ಹೂಡುವದಕ್ಕೆ ಟೊಂಕಕಟ್ಟಿದಂತೆ ಕಾಣುತ್ತದೆ. ಪ್ರೇಮಕ್ಕೂ ನಮ್ಮ ಧರ್ಮಕ್ಕೂ ಸಂಬಂಧವೇನು?" ಎಂದು ಸ್ವಲ್ಪ ವಿಷಾದದ ಧ್ವನಿಯಿಂದ ಉಸುರಿದನು.

ಕೂಡಲೇ ಫ್ಲೋರಾ ತನ್ನ ಸ್ವಾಭಿಮಾನಕ್ಕೆ ಕುಂದು ಬಂದಂತೆ ಕೆರಳಿ ಕೆಂಪಾಗಿ—" ಏನು? ನನ್ನ ಪ್ರೇಮಕ್ಕಿಂತ ನಿಮಗೆ ನಿಮ್ಮ ಧರ್ಮವೇ ಹೆಚ್ಚಾಗಿರುವಂತೆ ನೀವು ಮಾತಾಡುತ್ತೀರಿ? ಇಂಥ ಶುಷ್ಕ ಪ್ರೇಮಕ್ಕೆ ಧಿಕ್ಕಾರವಿರಲಿ" ಎಂದು ಗದ್ದರಿಸಿದಳು.

" ಪ್ರಿಯತಮೆ, ಹಾಗಲ್ಲ. ನೀನು ವಿಪರೀತ ತಿಳಿದುಕೊಳ್ಳಬಾರದು. ಆದರೂ ಯಾವ ಧರ್ಮದಲ್ಲಿ ನಾನು ಇಷ್ಟುದಿವಸ ಹುಟ್ಟಿಬೆಳೆದಿರುವೆನೋ

ಅಂಥ ಧರ್ಮವನ್ನು ನಿಂತಪೆಟ್ಟಿನ ಮೇಲೆ ಹೇಗೆ ಬಿಡಲಿಕ್ಕಾಗುತ್ತದೆ? ಅದಕ್ಕೆ ಸ್ವಲ್ಪ ಅವಕಾಶಬೇಡವೇ? ನನಗೆ ಒಂದು ವಾರದ ಅವಧಿಯನ್ನು ಕೊಟ್ಟರೆ ನಾನು ಮನಸ್ಸಿನ ನಿಶ್ಚಯವನ್ನು ಮಾಡುವೆನು" ಎಂದು ಅಪ್ಪಾಸಾಹೇಬನು ಕರುಣಾಜನಕವಾದ ಧ್ವನಿಯಿಂದ ವಿಜ್ಞಾಪಿಸಿದನು.

"ಸಾಕು, ಸಾಕು, ತಿಳಿಯಿತು ನಿಮ್ಮ ಪ್ರೇಮವು ಎಷ್ಟು ಪೊಳ್ಳು ಅವೆಯೆಂಬದು. ಈ ಮುಗ್ಧಬಾಲಿಕೆಯನ್ನು ನಿಮ್ಮ ತೋರಿಕೆಯ ಪ್ರೇಮದಿಂದ ಇಷ್ಟು ದಿವಸ ಮರುಳುಗೆ ಹಾಕಿದಿರಿ. ನಿಮ್ಮಂಥ ಕಪಟಿಗಳು ಏನು ಮಾಡುವರು ಏನು ಮಾಡಲಿಕ್ಕಿಲ್ಲ ಎಂಬ ನಿಯಮವಿಲ್ಲ. ಹೊರಟುಹೋಗಿರಿ. ಇನ್ನೊಮ್ಮೆ ನೀವು ನನ್ನ ಮನೆಗೆ ಬರಬೇಡಿರಿ" ಫ್ಲೋರಾ ಗರ್ಜಿಸಿದಳು.

"ಛೇ, ಛೇ, ನಿನ್ನ ಕಲ್ಪನೆಯು ವಿಪರೀತವಾಗಿದೆ. ನನ್ನ ಪ್ರೇಮದ ವಿಷಯಕ್ಕೆ ನಿನಗೆ ಏನೂ ವಿಕಲ್ಪಬೇಡ. ನಾನು ನಿನ್ನಲ್ಲಿ ಪ್ರೇಮಪರವಶನಾಗಿದ್ದೇನೆಂಬದಕ್ಕೆ ನನ್ನ ಜೀವದಾಣೆಯನ್ನು ಕೊಡುತ್ತೇನೆ. ನಿನ್ನ ಪ್ರೇಮವಿಲ್ಲದಿದ್ದರೆ ನನ್ನ ಜೀವನಯಾತ್ರೆಯು ಈ ಹೊತ್ತೇ ಮುಗಿಯಿತೆಂದು ತಿಳಿ. ಆದರೂ ಧರ್ಮವನ್ನು ಬಿಡುವದು ಸಣ್ಣ ಕೆಲಸವಲ್ಲ. ಏನೂ ತೊಂದರೆಯಾಗದಂತೆ ಎಲ್ಲ ವ್ಯವಸ್ಥೆಯನ್ನು ಮಾಡಲಿಕ್ಕೆ ಒಂದು ವಾರದ ಅವಧಿಯಾದರೂ ಬೇಕು. ಇಷ್ಟು ವೇಳೆಯನ್ನು ಪ್ರಿಯತಮೆ, ನೀನು ದಯಪಾಲಿಸಬಾರದೇ?" ಎಂದು ಅಪ್ಪಾಸಾಹೇಬನು ಬಹಳ ಆರ್ತಸ್ವರದಿಂದ ಮೊರೆಯಿಟ್ಟನು.

"ಒಳ್ಳೇದು. ಒಂದು ವಾರದ ಅವಧಿಯನ್ನು ಕೊಡುತ್ತೇನೆ. ಆದರೆ ಧರ್ಮಾಂತರ ಮಾಡುವ ಬಗ್ಗೆ ನಿಮ್ಮ ನಿಶ್ಚಯವಾಗುವತನಕ ನೀವು ನನ್ನ ಭೆಟ್ಟಿಗೆ ಮಾತ್ರ ಬರಬಾರದು. ಯಾವ ಮೋರೆಯಿಂದ ನಾನು ನಿಮಗೆ ಭೆಟ್ಟೀ ಕೊಡುವದು?" ಎಂದು ಬಹಳ ಬೇಜಾರಾದವಳಂತೆ ಉಸುರಿದಳು.

"ಪ್ರಿಯೇ, ಒಂದು ವಾರದ ತನಕ ನಿನ್ನ ಭೆಟ್ಟಿಯಿಲ್ಲದೆ ಇರುವದು ನನ್ನಿಂದಾಗದು. ನಡುವೆ ಒಂದೆರಡು ಸಾರೆಯಾದರೂ ನನಗೆ ಭೆಟ್ಟಿಗೆ ಅವಕಾಶ ಕೊಡಬೇಕು. ನಾನೇನೂ ನಿನ್ನ ಕೈ ಬಿಡುವನೆಂಬ ಸಂಶಯವು ನಿನಗೆ ಬೇಡಾ" ಎಂದು ಪ್ರಿಯಕರನು ಬಹಳ ದೈನ್ಯದಿಂದ ಪ್ರಾರ್ಥಿಸಿದನು.

"ಹಾಗೇ ಆಗಲಿ. ಆದರೆ ನೀವು ವಿವಾಹದ ಮಾತನ್ನು ಮಾತ್ರ ಎತ್ತಕೂಡದು" ಫ್ಲೋರಾ ಅಧಿಕಾರವಾಣಿಯಿಂದ ಆಜ್ಞೆಯನ್ನಿತ್ತಳು.

"ಆಗಲಿ. ನಿನ್ನ ಇಚ್ಛೆ" ಎಂದುಸುರಿದವನೇ ಅಪ್ಪಾಸಾಹೇಬನು ಪ್ರಿಯತಮೆಯ ಅನುಜ್ಞೆಯನ್ನು ಪಡೆದುಕೊಂಡು ಅವಳ ಬಂಗಲೆಯಿಂದ ಹೊರಬಿದ್ದನು.

ಹೊರಗೆ ಬಂದವನೇ ತನ್ನ ರಥದಲ್ಲಿ ಕುಳಿತು ತನ್ನ ಸೇವಕನಿಗೆ "ಬೇಗನೇ ಹೊಡೆ ಮನೆಗೆ" ಎಂದು ಅಪ್ಪಣೆಯನ್ನಿತ್ತನು. ಆಗಲೇ ರಾತ್ರಿಯಾಗಿತ್ತು. ದಾರಿಯಲ್ಲಿ ವಿದ್ಯುದ್ದೀಪಗಳು ಹತ್ತಿದ್ದವು. ಆ ದೀಪಗಳ ಬೆಳಕು ತನ್ನ ಮೋರೆಯಮೇಲೆ ಬೀಳುವದು ಮಾತ್ರ ಅಪ್ಪಾಸಾಹೇಬನಿಗೆ ಅಸಹ್ಯವೆನಿಸಿತು. ಧರ್ಮಪ್ರೇಮಗಳ ಗುದ್ದಾಟದಲ್ಲಿ ಸಿಕ್ಕುಬಿದ್ದು ಅವನ ಮನಸ್ಸು ನಿರ್ವಿಣ್ಣವಾಗಿತ್ತು. 'ಧರ್ಮವನ್ನು ಬಿಟ್ಟರೆ ಇಡೀ ಊರೇ ನನ್ನ ಮೋರೆಯಮೇಲೆ ಉಗುಳುವದು. ಬಿಡದಿದ್ದರೆ ನನ್ನ ದ್ವಿತೀಯ ಪ್ರಾಣವಾದ ಫ್ಲೋರಾಳಿಗೆ ಕಡೆಯ ಶರಣುಹೊಡೆಯಬೇಕು' ಎಂಬೆರಡು ವಿಚಾರಗಳಲ್ಲಿ ಅವನ ಮನಸ್ಸು ಹೊಯ್ದಾಡುತ್ತಿತ್ತು.

ಮನೆಯಲ್ಲಿ ಅವನ ನೂತನ ವಧುವು ಅಡಿಗೆಮಾಡಿ ಗಂಡನ ಹಾದೀ ನೋಡಿನೋಡಿ ಬೇಸತ್ತು ತನ್ನ ಕೋಣೆಯಲ್ಲಿ ಅಡ್ಡಾಗಿದ್ದಳು. ಅವನ ತಾಯಿ ಪಾರ್ವತೀಬಾಯಿಯಂತೂ ದಿನದ ಚಿಂತೆಯಿಂದಲೂ ದುಡಿತದಿಂದಲೂ ಬೇಸತ್ತು ಹಿತ್ತಲಪಡಸಾಲೆಯಲ್ಲಿ ಮಲಗಿಕೊಂಡಿದ್ದಳು. ಅಪ್ಪಾಸಾಹೇಬನು "ಅವ್ವಾ, ಅವ್ವಾ" ಎಂದು ಒದರುತ್ತ ಎಲ್ಲ ಕಡೆಗೂ ನೋಡಿ ಕಡೆಗೆ ಅವಳು ಮಲಗಿದ್ದೆಡೆ ಬಂದು "ಇದೇನು ಹೀಗೆ ಮಲಗಿದರೆ? ನನಗೆ ಹಸಿವೆಯಾಗಿದೆ. ಬೇಗನೇ ಸ್ವಲ್ಪ ಫಲಾಹಾರವನ್ನು ಕೊಡು. ನನಗೆ ತೀವ್ರವೇ ಹೋಗಬೇಕಾಗಿದೆ" ಎಂದು ಗರ್ಜಿಸಿದನು. ಗಂಡನ ಧ್ವನಿಯಿಂದ ಎಚ್ಚತ್ತ ಆತನ ನೂತನ ವಧುವು ಇಷ್ಟರೊಳಗೇ ಭೋಜನಶಾಲೆಯಲ್ಲಿ ಮಣೆಯನ್ನು ಹಾಕಿ ಉಂಡಿ ಮೊಸರವಲಕ್ಕಿಗಳನ್ನು ಒಂದು ತಾಟಿನಲ್ಲಿ ಹಾಕಿ ತಂದಿಟ್ಟಳು. ತಾಯಿಯು ಕಣ್ಣು ಒರಿಸುತ್ತ ಎದ್ದು ಭೋಜನಶಾಲೆಯೊಳಗೆ ಬರುವಷ್ಟರೊಳಗೆ ಸೊಸೆಯು ಎಲ್ಲವನ್ನು ಸಿದ್ಧಪಡಿಸಿದ್ದಳು. ಇದನ್ನು ನೋಡಿ ಅಪ್ಪಾಸಾಹೇಬನು — "ಅವ್ವಾ, ನಿನಗೆ ಹೇಳಿದರೆ ನೀನು ಈ ಖೋಡಿಯನ್ನು ಯಾಕೆ ನನ್ನ ಮುಂದೆ ಕಳಿಸುವಿ? ಇವಳ ಮುಖದರ್ಶನ ನನಗೆ ಬೇಡವೆಂದು ನಾನು ನಿನಗೆ ಎಷ್ಟುಸಾರೆ ಹೇಳಿದರೂ ನೀನು ಕೇಳುವದಿಲ್ಲವಲ್ಲ" ಎಂದು ಬಿರುಸು ಮಾತಾಡಿದನು.

"ಅಪ್ಪಾ, ಏನು ತಪ್ಪಾಯಿತು ? ನಿನಗೆ ಅವಳನ್ನು ಕಂಡರೆ ಯಾಕೆ ಇಷ್ಟು ಬೇಸರಿಕೆ ? ಮಾಡಿಕೊಂಡ ಹೆಂಡತಿಯು ಫಲಾಹಾರವನ್ನು ಬಡಿಸಿದರೆ ನೀನು ಯಾಕೆ ಇಷ್ಟು ಮೋರೆ ಕರ್ರಗೆ ಮಾಡಬೇಕು ?" ತಾಯಿ ಸ್ವಲ್ಪ ಬುದ್ಧೀ ಹೇಳಲಿಕ್ಕೆ ಹೋದಳು.

"ಅವ್ವಾ, ನೀನು ನನ್ನ ಮಾತಿಗೆ ಎದುರುತ್ತರ ಕೊಡಬೇಡ. ಕೊಟ್ಟರೆ ನನ್ನ ಮೈಯುರಿಯುತ್ತದೆ, ನೋಡು" ಎಂದು ಮಗನು ತಾಯಿಯ ಬಾಯಿಗೆ ಮುಚ್ಚಳ ಹಾಕಲು ಹವಣಿಸಿದನು.

"ಸಾಕು ಬಿಡಪ್ಪಾ. ಇತ್ತಕಡೆ ನಿನ್ನ ರೀತಿಯೇ ಬೇರೆಯಾಗಿದೆ. ಮನೆ ಹೊಲಗಳಿಗೆ ಕಡೆಗೆ ಲಕ್ಷ್ಯವಿಲ್ಲ. ಬಂದದ್ದು ಹೋದದ್ದರ ಕಡೆಗೆ ಲಕ್ಷ್ಯವಿಲ್ಲ. ಹಗಲು ಇಲ್ಲ, ರಾತ್ರಿಯಲ್ಲಿ, ಹೀಗೆ ಉಂಡಾಡಿಗನಂತೆ ತಿರುಗಿದರೆ ನಮ್ಮ ಮನೆತನದ ಅವಸ್ಥೆ ಏನಾಗಬೇಕು ? ಅವರು ಹೋದಂದಿನಿಂದಂತೂ ನಿನಗೆ ಹೇಳುವವರು ಕೇಳುವವರು ಯಾರೂ ಇಲ್ಲದಂತಾಗಿದೆ, ನನ್ನ ಗ್ರಹಚಾರಾ ! ನಮ್ಮ ಮನೆತನದ ಗ್ರಹಾಚಾರಾ !" ಎಂದು ಕೋಪ ದುಃಖಗಳಿಂದ ಪಾರ್ವತಿಬಾಯಿಯು ಹಲುಬಿದಳು.

"ಸಾಕು ನಿನ್ನ ಉಪನ್ಯಾಸ. ತಲೆತುಂಬ ಮಾತು ಕೊಚ್ಚುತ್ತೀ. ನಾನೇನು ನಿನ್ನಂಥವಳ ಮಾತು ಕೇಳುತ್ತ ಕೂಡುವಷ್ಟು ಸಣ್ಣವನೂ ಅಲ್ಲ. ಹುಚ್ಚನೂ ಅಲ್ಲ, ನನಗೆಲ್ಲಾ ತಿಳಿಯುತ್ತದೆ, ಬಾಯಿಮುಚ್ಚು." ಎಂದು ನಿಷ್ಠುರತನದಿಂದ ಗದ್ದರಿಸಿದಕೂಡಲೆ ಪಾರ್ವತೀಬಾಯಿಯು ಅಳುವದನ್ನು ತಡೆಯಲಾರದೆ ಹಿತ್ತಲುಪಡಸಾಲೆಯಲ್ಲಿ ಹೋಗಿ ಕಣ್ಣೀರು ಹಾಕಹತ್ತಿದಳು. ಸೊಸೆಯಂತೂ ಯಾವದೂ ತಿಳಿಯದೆ ಹೌಹಾರಿಹೋದಳು. ಅಪ್ಪಾಸಾಹೇಬನು ಲಗುಬಗೆಯಿಂದ ಉಪಹಾರ ತೀರಿಸಿಕೊಂಡವನೇ ತಾಟಿನಲ್ಲಿಯೇ ಕೈ ತೊಳೆದು ನೆಟ್ಟಗೆ ಅಟ್ಟದಮೇಲಿನ ತನ್ನ ಕೋಣೆಗೆ ಹೋಗಿ ಬಾಗಿಲು ಮುಚ್ಚಿಕೊಂಡು ಮಲಗಿಕೊಂಡನು.

"ಇದೇನು ಚಿಕ್ಕಂದಿನಿಂದ ಮಗನ ಲಾಲನೆಮಾಡಿದ್ದರ ಫಲವೋ ? ಅಥವಾ ಮೊದಲನೇ ಸೊಸೆಯನ್ನು ಮನೆಯಿಂದ ಹೊರದೂಡಿದ್ದಕ್ಕೆ ನನಗೆ ದೈವವು ಕೊಟ್ಟ ಪ್ರಾಯಶ್ಚಿತ್ತವೋ?" ಎಂದು ವಿಚಾರಮಾಡುತ್ತ ಪಾರ್ವತೀಬಾಯಿಯು ಚಿಂತಾಸಾಗರದಲ್ಲಿ ಮುಳುಗಿ ಥಡಗಾಣದೇ ಇದ್ದಳು.

## ೬

# ಗೋರಕ್ಷಣವನ್ನು ಹೇಗೆ ಮಾಡಬೇಕು?



ಚಾತುರ್ಮಾಸ್ಯವು ಅರ್ಧ ಕಳೆದು ಈಗ ಭಾದ್ರಪದಮಾಸವು ನಡೆದಿತ್ತು. ಎಲ್ಲಿ ನೋಡಿದರೂ ಹಬ್ಬಗಳ ಸುಗ್ಗಿ. ಗಣಪತಿಯ ಹಬ್ಬ, ಋಷಿಪಂಚಮಿ, ಜ್ಯೇಷ್ಠಾಷ್ಟಮಿ ಹೀಗೆ ಒಂದರಹಿಂದೊಂದು ಹಬ್ಬಗಳು. ಹಬ್ಬಗಳೆಂದರೆ ಮುಖ್ಯವಾಗಿ ನಾಲಿಗೆಗೆ ರುಚಿಕೊಡುವ ತಿನಿಸುಗಳು. ಹೂರಣವಿಲ್ಲದಿದ್ದರೆ ಹಬ್ಬವೇ ಅಲ್ಲ. ಅಷ್ಟಮಿಯ ಗೌರಿಗೆ ಕರಿದ ಪದಾರ್ಥಗಳೇ ಬೇಕು. ಹಬ್ಬದ ಪೂರ್ವದಲ್ಲಿ ಉಪವಾಸಗಳೇನಾದರೂ ಇದ್ದರೆ ಅವು ಮನೆಯೊಳಗಿನ ಹಿರಿಯರ ಪಾಲಿಗೆ– ವಿಶೇಷತಃ ವಿಧವೆಯರ ಪಾಲಿಗೆ. ಪೂಜೆಗಳಲ್ಲಿ ಹೀಗೆ ಮಾಡಬೇಕು ಹಾಗೆ ಮಾಡಬಾರದು ಎಂಬ ಅನೇಕ ವಿಧಿ ನಿಷೇಧಗಳನ್ನು ಪಾಲಿಸುವದರಲ್ಲಿಯೇ ಎಲ್ಲ ಆಸ್ಥೆಯು ಹಿಂಗಿ ಹೋಗುತ್ತದೆ. ಪೂಜೆಯಾದ ಮೇಲೆ ಪ್ರಾರ್ಥನೆಗೆ ಅವಕಾಶ– ಅದೂ ಒಂದೆರಡು ನಿಮಿಷ; ಹೆಚ್ಚುವೇಳೆ ಹಾಕಿದರೆ ಊಟಕ್ಕೆ ತಡವಾಗುವದು. ದ್ವಾದಶಿಯ ದಿವಸ– ಹಬ್ಬದದಿವಸ– ಗೋಗ್ರಾಸ ಹಾಕಬೇಕು. ದೇವರಿಗೆ ನೈವೇದ್ಯ ಕೊಡುವ ಭಕ್ಷ್ಯಗಳನ್ನೇ ಗೋಮಾತೆಗೂ ಕೊಡತಕ್ಕದ್ದು. ಆಕಳಿಗೆ ಇಂಥ ಪಕ್ವಾನ್ನವು ಹಿತಕರವೋ ಅಹಿತಕರವೋ ಎಂಬದು ಧರ್ಮದ ವಿಚಾರವಲ್ಲ. ಹಬ್ಬಗಳು ಯಾವ ರಾಷ್ಟ್ರಪುರುಷರ ಸ್ಮಾರಕವಾಗಿವೆ? ಅವರು ಮಾಡಿದ ಮಹಾಕಾರ್ಯಗಳೇನು? ಅವರ ಚರಿತ್ರೆಗಳಲ್ಲಿ ನಮಗೆ ಅನುಕರಣೀಯವಾದ ವಿಷಯಗಳೇನಾದರೂ ಅವೆಯೋ ಅಥವಾ ಇಲ್ಲವೋ? ಇವೇ ಮುಂತಾದ ಅಂಶಗಳ ಕಡೆಗೆ ಲಕ್ಷ್ಯಕೊಡದೆ ಇಂಥಿಂಥ ಹಬ್ಬಕ್ಕೆ ಇಂಥಿಂಥ ಅಡಿಗೆಗಳು ಆಗಬೇಕು ಬೇರೆ ಅಡಿಗೆಗಳು ಆಗಕೂಡದೆಂಬ ಪಾಕಶಾಲೆಯ ವಿಧಿನಿಷೇಧಗಳೇ ಹಬ್ಬಗಳಲ್ಲಿ ಜನರಿಗೆ ಎದ್ದುಕಾಣುವ ವಿಷಯಗಳು.

ಗಣಪತಿಯ ಹಬ್ಬವು ಮುಗಿದು ಒಂದೆರಡು ದಿವಸಗಳಾಗಿದ್ದುವು. ಮಧ್ಯಾಹ್ನ ಮೂರು ಘಂಟೆಯ ಸಮಯ. ಬಳವಂತರಾಯನು ತನ್ನ ಚಿಕ್ಕ ಮನೆಯ ಪಡಸಾಲೆಯಲ್ಲಿ ವರ್ತಮಾನಪತ್ರ ಓದುತ್ತ ಕೂತಿದ್ದನು. ಆಗ ಚಂದ್ರಪುರದಿಂದ ಒಂದು ಮೋಟಾರು ಬಂದು ಮನೆಯ ಮುಂದೆ ನಿಂತಿತು. ಚಂದ್ರಪುರವು ಶಂಕರಪುರದಿಂದ ಇಪ್ಪತ್ತು ಮೈಲು. ಮೋಟಾರಿನಲ್ಲಿ ಶಾಫರನೊಬ್ಬನೇ. ಅವನು ಒಳಗೆ ಬಂದು ಚಂದ್ರಪುರದ ಭಗವಾನದಾಸ ಶೇಟಜಿಯವರ ಪತ್ರವನ್ನು ಬಳವಂತರಾಯನ ಕೈಯಲ್ಲಿ ಕೊಟ್ಟನು. ಶೇಟಜಿಯವರ ಗೋಶಾಲೆಯಲ್ಲಿ ಕೆಲವು ಆಕಳುಗಳಿಗೆ ಜಡ್ಡಾಗಿದ್ದದರಿಂದ ಅವುಗಳಿಗೆ ಔಷಧೋಪಚಾರಮಾಡಲು ಬರಬೇಕೆಂಬ ವಿಜ್ಞಾಪನೆಯ ಪತ್ರವು. ಪತ್ರವನ್ನು ನೋಡಿದೊಡನೆ ಬಳವಂತರಾಯನು ಅವಶ್ಯವಾದ ಔಷಧಸಾಮಗ್ರಿಗಳನ್ನು ತೊಗಲಿನ ಕೈಚೀಲದಲ್ಲಿ ಹಾಕಿಕೊಂಡು ಹೊರಟನು. ಗೋಶಾಲೆಗೆ ಬಂದು ಮುಟ್ಟಬೇಕಾದರೆ ನಾಲ್ಕೂವರೆ ಘಂಟೆಯಾಯಿತು.

ಚಂದ್ರಪುರವು ದೊಡ್ಡ ಊರು. ಜನವಸತಿ ಸುಮಾರು ಇಪ್ಪತ್ತೈದು ಸಾವಿರ. ಭಗವಾನದಾಸನು ಬಹಳ ಸಿರಿವಂತನು. ಅವನ ಇಬ್ಬರು ಮಕ್ಕಳು ಮುಂಬಯಿಯಲ್ಲಿ ಎರಡು ಬ್ಯಾಂಕುಗಳನ್ನು ನಡೆಯಿಸಿದ್ದರು. ಶೇಟಜಿಯು ಸರಾಫಿಯ ವ್ಯಾಪಾರದಲ್ಲಿ ಐವತ್ತು ಲಕ್ಷಗಳ ಮೇಲೆ ಗಳಿಸಿ ಈಗ ವಾರ್ಧಕ್ಯವನ್ನು ದೇವರ ಆರಾಧನೆಯಲ್ಲಿಯೂ ಪರೋಪಕಾರದ ಕೆಲಸಗಳಲ್ಲಿಯೂ ಕಳೆಯುತ್ತಿದ್ದನು. ಚಂದ್ರಪುರದಲ್ಲಿ ಅವನದೊಂದು ಗೋಶಾಲೆಯಿತ್ತು. ಶಾಲೆಯಲ್ಲಿ ಐವತ್ತು ಆಕಳುಗಳಿದ್ದುವು, ಬಹುಶಃ ಎಲ್ಲ ಆಕಳುಗಳು ಕಟುಕರ ಕೈಯೊಳಗಿಂದ ಪಾರಾಗಿ ಬಂದಂಥವು. ಇವುಗಳ ವ್ಯವಸ್ಥೆಯನ್ನು ನೋಡಲಿಕ್ಕೆ ಗೋಶಾಲೆಯ ಮೇಲೆ ನಾಲ್ಕು ಆಳುಗಳು—ಇಬ್ಬರು ಕಾರಕೂನರು—ರಾಮದಾಸನೆಂಬ ಒಬ್ಬ ಮೇಲ್ವಿಚಾರಕನು. ಈ ಗೋಶಾಲೆಗಾಗಿ ಶೇಟಜಿಯು ತಿಂಗಳಿಗೆ ಒಂದು ಸಾವಿರ ರೂಪಾಯಿ ವೆಚ್ಚ ಮಾಡುತ್ತಿದ್ದನು. ರಾಮದಾಸನಿಗೆ ಸ್ವಲ್ಪ ಪಶುಚಿಕಿತ್ಸೆಯು ಗೊತ್ತಿತ್ತು; ಆದರೂ ಅವನ ಜ್ಞಾನವು ಅಷ್ಟಗಷ್ಟೇ. ಕಟುಕರ ಕೈಯೊಳಗಿಂದ ಮತ್ತೆ ಕೆಲವು ಆಕಳಗಳನ್ನು ಬಿಡಿಸಿಕೊಳ್ಳಲಿಕ್ಕೆ ರಾಮದಾಸನು ಹೋಗಿರಲು ಶಾಲೆಯಲ್ಲಿಯ ಎಂಟುಹತ್ತು

ಆಕಳುಗಳು ಬೇನೆಬಿದ್ದವು. ಅದಕ್ಕಾಗಿ ಸಮೀಪದಲ್ಲಿರುವ ಪಶುವೈದ್ಯನಾದ ಬಳವಂತರಾಯನಿಗೆ ಹೇಳಿಕಳುಹಿಸಬೇಕಾಯಿತು.

ಗೋಶಾಲೆಯ ಕಟ್ಟಡವು ಚೆನ್ನಾಗಿತ್ತು. ಮೇಲೆ ತಗಡುಗಳು; ಕೆಳಗೆ ಕಲ್ಲುಹಾಸಿಗೆ. ಆದರೆ ಗಟಾರುಗಳನ್ನು ಮಾತ್ರ ಚನ್ನಾಗಿ ಕಟ್ಟಿದ್ದಿಲ್ಲ. ಆದರಿಂದ ಕುರುಡುನೊಣಗಳಿಗೆ ಬಹಳ ಸುಖವಾಗಿತ್ತು.

ಆಕಳುಗಳಲ್ಲಿ ಮುದಿ, ಇಲ್ಲವೆ ಕುಂಟ, ಇಲ್ಲವೆ ಬೇನೆಗೊಳಕ ಆಕಳು ಗಳೇ ಬಹಳ. ಗೋಶಾಲೆಯಲ್ಲಿ ಒಂದಿಲ್ಲೊಂದು ಆಕಳು,ಬೇನೆಯಿಂದ ಸರ ಳುತ್ತಲೇ ಇರುವದು. ಹೀಗಾಗಿ ಮೇಲ್ವಿಚಾರಕರ ಬಹಳವೇಳೆಯು ಆಕಳು ಗಳ ಶುಶ್ರೂಷೆಯಲ್ಲಿಯೇ ಹೋಗುತ್ತಿತ್ತು.

ಬಳವಂತರಾಯನು ಗೋಶಾಲೆಗೆ ಬಂದಕೂಡಲೆ ರೋಗಿಯಾದ ಹತ್ತು ಆಕಳುಗಳನ್ನು ಚನ್ನಾಗಿ ಪರೀಕ್ಷಿಸಿದನು. ಪ್ರತಿಯೊಂದು ಹಬ್ಬದ ದಿವಸ ಶೇಟಜಿಯು ಗೋಗ್ರಾಸವೆಂದು ತನ್ನ ಮನೆಯೊಳಗಿನ ಪಕ್ವಾನ್ನಗಳನ್ನು ಗೋಶಾಲೆಗೆ ಕಳಿಸಿಕೊಡುತ್ತಿದ್ದನು. ಗಣಪತಿಯ ಹಬ್ಬದ ಮೋದಕಗಳನ್ನು ತಿಂದದ್ದೇ ಆಕಳುಗಳ ಬೇನೆಗೆ ಮೂಲವಾಗಿತ್ತು. ಬಳವಂತರಾಯನು ಅವು ಗಳಿಗೆ ಔಷಧವನ್ನು ಕೊಟ್ಟು ಇಪತ್ತುನಾಲ್ಕು ತಾಸುಗಳ ವರೆಗೆ ಅವುಗಳ ಹೊಟ್ಟೆಗೆ ಏನೂ ಹಾಕಬಾರದೆಂದು ಹೇಳಿ ಶೇಟಜಿಗೆ ಭೆಟ್ಟಿಯಾಗಬೇಕೆಂದು ಗೋಶಾಲೆಗೆ ಹೊಂದಿಕೊಂಡಿರುವ ಅವರ ಬಂಗ್ಲೆಯೊಳಗೆ ಹೋದನು.

ಬಂಗ್ಲೆಯ ಹೊರಗಿನ ಬೈಲುಪಡಸಾಲೆಯಲ್ಲಿ ಆರಾಮ ಖುರ್ಚಿಯ ಮೇಲೆ ಶೇಟಜಿಯು ಕುಳಿತಿದ್ದನು. ಬದಿಯಲ್ಲಿ ಮೂರುನಾಲ್ಕು ಆರಾಮ ಖುರ್ಚಿಗಳೂ ಎರಡು ಮಂಚಾಸನಗಳೂ ಇದ್ದವು. ಹೋದ ಕೂಡಲೆ ಶೇಟ ಜಿಯು ಬಳವಂತರಾಯನನ್ನು ಬಹಳ ಮರ್ಯಾದೆಯಿಂದ ಬರಮಾಡಿಕೊಂ ಡನು. ಬಂದ ಕೆಲಸದ ವಿಷಯಕ್ಕೆ ನಾಲ್ಕು ಮಾತುಗಳಾದ ಮೇಲೆ ಶೇಟ ಜಿಯು–

" ಡಾಕ್ಟರ ಸಾಹೇಬ, ನಮ್ಮ ಗೋಶಾಲೆಯನ್ನು ನೀವು ನೋಡಿದಿ ರಲ್ಲ. ಆದರ ವಿಷಯಕ್ಕೆ ನಿಮ್ಮ ಅಭಿಪ್ರಾಯವೇನು? " ಎಂದು ಕೇಳಿದನು. ಬಳವಂತನು ಕಿರುನಗೆ ನಕ್ಕು " ಛನ್ನಾಗಿಧೆ, ಛನ್ನಾಗಿಡೆ " ಎಂದು ಉಪಚಾ

ರದಿಂದ ನುಡಿಯುತ್ತ ಶೇಟಜಿಯು ಮೋರೆಯನ್ನು ಮಿಕಿಮಿಕಿ ನೋಡುತ್ತ ಕೂತನು. ಶೇಟಜಿಗೆ ತುಂಬಾ ಆಶ್ಚರ್ಯ. ಇದು ವರೆಗೆ ಒಂದವರೆಲ್ಲ ಅವನ ಗೋಶಾಲೆಯನ್ನೂ ಅವನ ದಾನಶೂರತ್ವವನ್ನೂ ಮುಕ್ತಕಂಠವಾಗಿ ಹೊಗಳಿದ್ದರು. ತಿಂಗಳಿಗೆ ಸಾವಿರಾರು ರೂಪಾಯಿ ಗೋಮಾತೆಗಾಗಿ ವೆಚ್ಚಮಾಡುವವರಾರು ಈ ಯುಗದಲ್ಲಿ ?

ಡಾಕ್ಟರರ ಅಭಿಪ್ರಾಯವನ್ನು ಊಹಿಸಿ ಶೇಟಜಿಯು– "ಡಾಕ್ಟರರೇ, ತಾವೇನೂ ಅನುಮಾನ ಮಾಡಬೇಕಾದ ಕಾರಣವಿಲ್ಲ,ನನಗೆ ತಮ್ಮ ಸ್ವತಂತ್ರ ಅಭಿಪ್ರಾಯವೇ ಬೇಕಾಗಿದೆ" ಎಂದು ಅವನಿಗೆ ಉತ್ತೇಜನಕೊಟ್ಟನು.

ಒಳವಂತರಾವ– "ತಮ್ಮ ಗೋಶಾಲೆಯು ಚನ್ನಾಗಿದೆ. ತಮ್ಮಂಥ ಪುಣ್ಯಾತ್ಮರು ಈ ದಿನಸದಲ್ಲಿ ಅಪರೂಪ. ಆದರೂ ನನ್ನ ವಿಚಾರಸರಣಿ–"

"ಹೌದು, ಹೌದು 'ನಿಮ್ಮಂಥ ಸುಶಿಕ್ಷಿತರ ವಿಚಾರಸರಣಿಯೇ ನನಗೆ ಬೇಕಾಗಿದೆ. ನೀವು ಮೈಚಳಿಬಿಟ್ಟು ಹೇಳಬಹುದು. ನನಗೆ ಸಂತೋಷ" ಎಂದು ಶೇಟಜಿಯು ಡಾಕ್ಟರನಿಗೆ ಹುರುಪುಗೊಟ್ಟನು.

"ಶೇಟಜಿಯವರೇ, ತಮ್ಮ ಗೋಶಾಲೆಯು ಗೋರಕ್ಷಣದ ಮಧ್ಯಮ ತರಗತಿಯ ಕಾರ್ಯವನ್ನು ಮಾಡುತ್ತದೆ. ಆದರೆ ಉತ್ತಮ ತರಗತಿಯ ಕಾರ್ಯವು ತಮ್ಮಂಥ ದಾನಶೂರರಿಗೆ ಸಾಧ್ಯವದೆ." ಎಂದು ಒಳವಂತರಾಯನು ತನ್ನ ವಿಷಯಕ್ಕೆ ಪ್ರಸ್ತಾವನೆಯನ್ನು ಮಾಡಿದನು.

"ಉತ್ತಮ ತರಗತಿಯ ಗೋರಕ್ಷಣವೆಂದರೇನು ?" ಎಂದು ಶೇಟಜಿಯು ಪ್ರಶ್ನೆಮಾಡಿದನು.

ಒಳವಂತರಾಯನು– "ತಾವು ಕಟುಕರ ಕೈಯೊಳಗಿಂದ ನೂರು ರೂಪಾಯಿಯ ಆಕಳಿಗೆ ಇನ್ನೂರು ರೂಪಾಯಿ ಕೊಟ್ಟು ಕೆಲವು ಆಕಳಾ ಉಳಿಸುತ್ತೀರಿ. ಆದರೆ ಇದರಿಂದ ಏನಾದ ಹಾಗಾಯಿತು ? ಕಟುಕರವನಿಗೆ ಮತ್ತೆ ಹೆಚ್ಚು ಆಕಳಗಳನ್ನು ಕೊಳ್ಳಲಿಕ್ಕೆ ಮೂಲಧನವನ್ನು ಒದಗಿಸಿ ಕೊಟ್ಟಂತೆ ಆಗುವದಿಲ್ಲವೇ ?"

ಶೇಟಜಿಯು– "ನೀವು ಹೇಳುವದೇನೋ ನಿಜ. ಆದರೆ ಅಷ್ಟಾದರೂ ಆಕಳುಗಳನ್ನು ಉಳಿಸಿದ ಪುಣ್ಯವು ಬರುವದಿಲ್ಲವೇ ?" ಎಂದು ಕೇಳಿದನು.

" ಹಾಗಲ್ಲ, ಶೇಟಜಿಯವರೇ, ತಾವು ಕಟುಕರಿಂದ ಶಿಕ್ಕಂಥ ಆಕಳುಗಳನ್ನು ಉಳಿಸಿ ಅವುಗಳ ಸಂರಕ್ಷಣೆ ಮಾಡುವದರಿಂದ ಗೋರಕ್ಷಣಕ್ಕೆ ಸಾಕಷ್ಟು ಉತ್ತೇಜನವು ಶಿಗುವದಿಲ್ಲ. ನೀವು ಒರೇ ಕೆಲವು ದರಿದ್ರ ಆಕಳುಗಳನ್ನು ಉಳಿಸುವದೇನೋ ನಿಜ. ಆದರೆ ಇಷ್ಟೇ ದುಡ್ಡಿನ ವಿನಿಯೋಗದಿಂದ ಹೆಚ್ಚು ಫಲಕಾರಿಯಾದ ಕಾರ್ಯವನ್ನು ಮಾಡಬಹುದು. ಆದರೆ ಕ್ಷಮಿಸಬೇಕು. ನನಗೆ ಕೂಡಲೆ ಊರಿಗೆ ಹೊರಡಬೇಕು. ನಾನು ಮನೆಯಲ್ಲಿ ಎಂಟು ಆಕಳ ಗಳನ್ನು ಕಟ್ಟಿಕೊಂಡಿದ್ದೇನೆ. ಅವುಗಳ ಹಾಲನ್ನು ಹಿಂಡಿಸಿಕೊಂಡು ಗ್ರಾಹ ಕರಿಗೆ ಮುಟ್ಟಿಸಬೇಕು. ಆದ್ದರಿಂದ ಇನ್ನೊಮ್ಮೆ ತಮ್ಮ ಕಡೆಗೆ ಬೇಕಾದರೆ ಬರುವೆನು. ಈಗ ಮಾತ್ರ ಹೋಗಲು ದಯಮಾಡಿ ಅನುಜ್ಞೆಯನ್ನು ಕೊಡ ಬೇಕು " ಬಳವಂತರಾಯನು ವಿನಯಪೂರ್ವಕವಾಗಿ ಸೂಚಿಸಿದನು.

"ಛಿಡ್ರಿ, ಡಾಕ್ಟರರೇ, ಊರಿಗೆ ಹೋಗುವ ಚಿಂತೆಯೇಕೆ ನಿಮಗೆ ? ನಾನು ನನ್ನ ಸ್ವಂತ ಮೋಟಾರು ಕೊಟ್ಟು ನೀವು ಏಳು ಘಂಟೆಯೊಳಗಾಗಿ ಶಂಕರಪುರಕ್ಕೆ ಮುಟ್ಟುವಂತೆ ಮಾಡುತ್ತೇನೆ. ಈಗ ನಡೆದ ವಿಷಯದ ಮೇಲೆ ತಮ್ಮ ವಿಚಾರಗಳನ್ನು ತಿಳಿದುಕೊಳ್ಳುವ ಅಪೇಕ್ಷೆಯಾಗಿದೆ ನನಗೆ. " ಎಂದು ಮತ್ತೆ ವಿಷಯನಿರೂಪಣಕ್ಕೆ ಶೇಟಜಿಯು ಚಾಲನೆಯನ್ನು ಕೊಟ್ಟನು

ಬಳವಂತರಾಯನು ತನ್ನ ವಿಚಾರಗಳ ಪ್ರಸಾರಕ್ಕೆ ಒಳ್ಳೇ ಅವಕಾಶ ವೆಂದು ಹುರುಪಿನಿಂದ ಆರಂಭಿಸಿದನು. " ಒಳ್ಳೇದು ಹಾಗಾದರೆ, ತಾವು ಈ ಕೇವಲ ಗೋವಿನಾಶ ಪ್ರತಿಬಂಧಕ್ಕೆ ಇಷ್ಟೊಂದು ಮಹತ್ವವನ್ನು ಕೊಡ ಬಾರದು. ಎಲ್ಲಿಯ ತನಕ ದರಿದ್ರಿರು ದೇಶದಲ್ಲಿರುವರೋ ಅಲ್ಲಿಯವರೆಗೆ ಗೋವುಗಳನ್ನು ಕಟುಕರಿಗೆ ಮಾರುವದು ನಿಲ್ಲಲಾರದು. ಆದರೆ ಚಲೋ ಜಾತಿಯ ಆಕಳುಗಳ ಮತ್ತು ಎತ್ತುಗಳ ಮಹತ್ವವು ನಮ್ಮ ದೇಶಕ್ಕೆ ಬಹಳ ವಾಗಿದೆ. ನಮ್ಮ ಹಿಂದುಸ್ತಾನವು ಕೃಷಿಪ್ರಧಾನದೇಶವು. ಎತ್ತುಗಳು ಸುದೃಢ ಮತ್ತು ಧಷ್ಟಪುಷ್ಟವಿರದಿದ್ದರೆ ಒಕ್ಕಲತನವು ಭರದಿಂದ ನಡೆಯಲಾ ರದು. ಆದಕ್ಕೆ ಒಳ್ಳೇ ಕಸುವುಳ್ಳ, ಕಾರ್ಯಕ್ಷಮವಾದ, ಎತ್ತುಗಳ ಜಾತಿಗ ಳನ್ನು ನಾವು ಕಾಯಲಿಕ್ಕೆಬೇಕು. ಅದರಂತೆ ಆಕಳಹಾಲು ನಮ್ಮ ಮಕ್ಕ ಳಿಗೆ ವಿಪುಲವಾಗಿ ಮತ್ತು ಶುದ್ಧ ಸ್ವರೂಪದಲ್ಲಿ ಶಿಗದ್ದರಿಂದಲೇ ನಮ್ಮ ದೇಶದ ಕೂಸುಗಳು ರೋಗಿಷ್ಟ, ಆಶಕ್ತ ಮತ್ತು ಅಲ್ಪಾಯುವಾಗಿರುವವು. ಚಿಕ್ಕ

ಮಕ್ಕಳಿಗೂ ರೋಗಿಗಳಿಗೂ, ಮುದುಕರಿಗೂ ಆಕಳ ಹಾಲು ಅಮೃತಕ್ಕೆ ಸರಿ. ಶುದ್ಧವಾದ ಆಕಳಹಾಲು ಶಿಗದ್ದಕ್ಕೆ ನಮ್ಮ ಜನರು ಎಮ್ಮೆಯ ಹಾಲಿನಲ್ಲಿ ನೀರು ಕೂಡಿಸಿ ಮಕ್ಕಳಿಗೆ, ಹಾಕುತ್ತಾರೆ. ಅದೂ ತಡೆಯದಿದ್ದರೆ ಪರದೇಶದ 'ಗ್ಲಾಕ್ಸೋ' ಮೊದಲಾದ ಕೃತ್ರಿಮ ಪದಾರ್ಥಗಳ ಮೇಲೆ ಅವಲಂಬಿಸಬೇಕಾಗುವದು.

ನಮ್ಮ ಶಹರಗಳಲ್ಲಿ ಆಕಳ ಸಂಖೆಯೇ ಬಹಳಕಡಿಮೆ. ಗೌಳಿಗರೆಲ್ಲ ಬಹುಶಃ ಎಮ್ಮೆಗಳನ್ನೇ ಕಟ್ಟುವರು. ಇದಕ್ಕೆ ಕಾರಣವೇನಂದರೆ ಈಗಿನ ಆಕಳುಗಳು ಶೇರು ಒಂದುವರೆ ಶೇರಿನ ಮೇಲೆ ಹಾಲು ಕೊಡುವದಿಲ್ಲ. ಹೆಚ್ಚು ಹಾಲು ಕೊಡುವ ಆಕಳ ಜಾತಿಗಳು ಈಗ ಮಾಯವಾಗಹತ್ತಿವೆ. ಆದರೆ ಒಳ್ಳೇ ಜಾತಿಯ ಆಕಳುಗಳನ್ನೂ ಹೋರಿಗಳನ್ನೂ ನಾವು ಕಂಡು ಹಿಡಿದು ಅವುಗಳನ್ನು ಚನ್ನಾಗಿ ಸಾಕಿ ಕಾದುಕೊಂಡರೆ ನಮ್ಮ ಚಿಕ್ಕ ಮಕ್ಕಳ ಆಯುರಾರೋಗ್ಯಗಳೂ ಬೆಳೆಯುವವು; ಒಕ್ಕಲತನವೂ ಮುಂದಕ್ಕೆ ಬರುವದು. ''

'' ಒಳ್ಳೇದು, ಡಾಕ್ಟರರೇ, ಈಗ ನಮ್ಮ ಗೋಶಾಲೆಯ ಸುಧಾರಣೆಯನ್ನು ಹ್ಯಾಗೆ ಮಾಡಬೇಕೆನ್ನುವಿರಿ? '' ಎಂದು ಶೇಟಜಿಯು ಬಹಳ ಆರಳಿದ ಮೋರೆಯುಳ್ಳವನಾಗಿ ಪ್ರಶ್ನೆ ಮಾಡಿದನು.

ಡಾಕ್ಟರ ಅಂದದ್ದು— '' ಅದನ್ನೇ ನಾನು ಇನ್ನು ಹೇಳುವದು. ನೀವು ಚಲೋ ಬಲ್ಲವರನ್ನು ಸಿಂಧ, ಮಾಳವಾ, ಗುಜರಾಥಗಳಿಗೆ ಕಳಿಸಿ, ಉತ್ತಮ ಜಾತಿಯ ಆಕಳುಗಳನ್ನೂ ಹೋರಿಗಳನ್ನೂ ಕೊಂಡು ತರಿಸತಕ್ಕದ್ದು. ತಮ್ಮಂಥ ಲಕ್ಷ್ಮೀಪುತ್ರರಿಗೇ ಇದು ಸಾಧ್ಯ. ಆ ಮೇಲೆ ಅವುಗಳ ಸಂತತಿಗಳನ್ನು ನಿಮ್ಮ ಗೋಶಾಲೆಯಲ್ಲಿ ಬೆಳಿಸತಕ್ಕದ್ದು. ಅವುಗಳ ಪ್ರಕೃತಿಗುಣ, ಆಹಾರ, ಸ್ವಭಾವ ಮೊದಲಾದವುಗಳನ್ನು ಚನ್ನಾಗಿ ಬಲ್ಲವರನ್ನೇ ಈ ಕೆಲಸಕ್ಕೆ ನೇಮಿಸತಕ್ಕದ್ದು. ಇಲ್ಲದಿದ್ದರೆ ಆ ದನಗಳು ಒಂದುವೇಳೆ ನಮ್ಮಲ್ಲಿಯ ಆಹಾರಕ್ಕೆ ತಡೆಯಲಿಕ್ಕಿಲ್ಲ. ಅವುಗಳಿಗೆ ಮಾನಿಸುವಂಥ ನೈಸರ್ಗಿಕ ಆಹಾರವನ್ನೇ ಅವುಗಳಿಗೆ ಹಾಕತಕ್ಕದ್ದು. ಬೇಯಿಸಿದ ಅಡಿಗೆಯನ್ನಾಗಲಿ, ನಾವು ಉಣ್ಣುವಂಥ ಪಕ್ವಾನ್ನವನ್ನಾಗಲಿ ಅವುಗಳಿಗೆ ಹಾಕುವದು ಧರ್ಮದ ಮೂಢ ತಿಳುವಳಿಕೆಯು. ಗೋಮಾತೆಯ ಬಗ್ಗೆ ನಮಗೆ ನಿಜವಾಗಿ ಪೂಜ್ಯಬುದ್ಧಿ

ಯಿದ್ದರೆ, ಅವುಗಳನ್ನು ಕಂಡಾಗೆಲ್ಲ ಬಾಲವನ್ನು ಮೋರೆಯ ಮೇಲೆ ಆಡಿಸಿಕೊಳ್ಳುವದು- ಹಣೆಗೆ ಕುಂಕುಮಹಚ್ಚಿ ಅವುಗಳಿಗೆ ಪ್ರದಕ್ಷಿಣೆ ನಮಸ್ಕಾರ ಹಾಕುವದು- ಇಂಥ ಅನುಪಕಾರಕ ಆಡಂಬರವನ್ನು ಬಿಟ್ಟುಬಿಡಬೇಕು. ನಮ್ಮ ಆಕಳುಗಳಿಗೆ ಬೇಕಾದದ್ದು, ತಿನ್ನಲಿಕ್ಕೆ ಸ್ವಾಭಾವಿಕವಾದ ಆಹಾರ. ಸ್ವಚ್ಛವಾದ ನೀರು, ಹಗಲೆಲ್ಲ ಹುಲ್ಲಿನ ಬೈಲು, ರಾತ್ರಿ ಹವೆಯಾಡುವ ಮನೆ. ಪ್ರದಕ್ಷಿಣೆ ನಮಸ್ಕಾರಗಳಿಂದ ಗೋರಕ್ಷಣವಾಗುವದಿಲ್ಲ.

ಇನ್ನು ಎರಡನೇ ವಿಷಯವೇನಂದರೆ, ಇಂಥ ಆಕಳುಗಳ ಹಾಲನ್ನು ಯೋಗ್ಯ ವೇಳೆಗೆ ಹಿಂಡಿಕೊಂಡು ಸ್ವಚ್ಛವಾದ ಪಾತ್ರೆಗಳಲ್ಲಿ ಊರಜನರಿಗೆ ಒದಗುವಂತೆ ಮಾಡುವದು. ಇಂಥ ಹಾಲನ್ನು ಧರ್ಮಾರ್ಥವಾಗಿ ಎಲ್ಲರಿಗೂ ಕೊಡುವದೇನೂ ಕುಬೇರನಿಗೆ ಸಹ ಸಾಧ್ಯವಾಗಲಿಕ್ಕಿಲ್ಲ. ಇದ್ದರಿಂದ ಯೋಗ್ಯವಾದ ಬೆಲೆಗೆ ನಿರ್ದೋಷವಾದ ಹಾಲು ಊರೊಳಗಿನ ಪ್ರತಿಯೊಂದು ಮನೆಗೆ ಸಿಗುವಂತೆ ಮಾಡಿದರೆ ಅದಕ್ಕೆ ಉಚ್ಚ ತರಗತಿಯ ಸಮಾಜಸೇವೆಯೆನ್ನಲಿಕ್ಕೆ ಏನೂ ಬಾಧಕವಿಲ್ಲ. "

" ಒಳ್ಳೇದು, ಡಾಕ್ಟರಸಾಹೇಬ, ನಿಮ್ಮ ವಿಚಾರಗಳು ನನಗೆ ತುಂಬಾ ಗ್ರಾಹ್ಯವಾಗಿವೆ. ಆದರೆ ಇವುಗಳನ್ನು ಕಾರ್ಯರಂಗದಲ್ಲಿ ಇಳಿಸಲಿಕ್ಕೆ ತಾವೇ ಈ ಗೋಶಾಲೆಯನ್ನು ನಡೆಯಿಸುವ ಹೊಣೆಯನ್ನು ವಹಿಸಬೇಕೆಂದು ನನ್ನ ಸೂಚನೆಯಿದೆ. ನಿಮ್ಮಂಥ ತಜ್ಞರೇ ಈ ಕಾರ್ಯಕ್ಕೆ ತಕ್ಕವರು. " ಎಂದು ಶೇಟಜಿಯು ಡಾಕ್ಟರರಿಗೆ ಆಗ್ರಹಪೂರ್ವಕವಾಗಿ ಹೇಳಹತ್ತಿದನು.

" ಈ ಮಾತಿಗೆ ಮಾತ್ರ ನಾನು ಈಗಲೇ ಉತ್ತರವನ್ನು ಕೊಡಲಾರೆನು. ಇನ್ನೆರಡು ದಿವಸಗಳ ಮೇಲೆ ಬಾದು ನಿಮಗೆ ತಿಳಿಸುತ್ತೇನೆ. " ಬಳವಂತರಾಯನು ಸ್ವಲ್ಪ ವಿಚಾರದಲ್ಲಿ ಬಿದ್ದವನಾಗಿ ಹೇಳಿದನು.

ಶೇಟಜಿ- " ನೀವು ಎರಡು ದಿವಸ ಅವಧಿಯನ್ನು ತಕ್ಕೊಳ್ಳಬಹುದು. ಆದರೆ ಆ ಮೇಲೆ ಮಾತ್ರ ನಕಾರ ಉತ್ತರವನ್ನು ಕೊಟ್ಟರೆ ನಾನೇನೂ ಕೇಳಲಿಕ್ಕಿಲ್ಲ. ನಿಮ್ಮಂಥ ಸಮಾಜಹಿತಬುದ್ಧಿಯುಳ್ಳ, ಮನಮುಟ್ಟಿ ಕೆಲಸ ಮಾಡುವ ತರುಣರೇ ಈ ಕೆಲಸಕ್ಕೆ ಯೋಗ್ಯರು. ನೀವು ಬಿಟ್ಟರೆ ಈ ಗೋಶಾಲೆಯು ಪೂರ್ವಪದ್ಧತಿಯಿಂದಲೇ ಸಾಗುವದು. ಇದ್ದರಿಂದ ನೀವು ಹೇಗಾದರೂ ಮಾಡಿ ಬರಲಿಕ್ಕೆಬೇಕು " ಎಂದು ಹಟ ಹಿಡಿದರು.

ಬಳವಂತರಾವ– " ಅದರ ಶೇಟಜಿಯವರೇ, ಶಂಕರಪುರದಲ್ಲಿ ನಾನೊಂದು ಸಣ್ಣ ಗೋಶಾಲೆಯನ್ನು ಮನೆಯಲ್ಲಿಯೇ ಇಟ್ಟದ್ದನ್ನು ತಮಗೆ ಹೇಳಿದೆ. ಅದೂ ನಡೆಯಲಿಕ್ಕೆಬೇಕು ಯಾಕಂದರೆ ನಾನು ನನ್ನ ಹಳೆಯ ಗ್ರಾಹಕರಿಗೆ ಸುಳ್ಳಾಗಲಾರೆ. ಅದರ ವ್ಯವಸ್ಥೆ ಹೇಗೆ ಮಾಡಬೇಕೆಂಬ ಚಿಂತೆ ನನಗೆ " ಎಂದು ತನ್ನ ಒಳಗಿನ ತೊಂದರೆಯನ್ನು ಅವರ ಮುಂದಿಟ್ಟನು.

ಶೇಟಜಿ– " ಅದರ ಚಿಂತೆ ಇಷ್ಟೇಕೆ ? ನೀವು ಎಲ್ಲಾ ವ್ಯವಸ್ಥೆ ಮಾಡೇ ಇಟ್ಟಿದ್ದಿರಿ. ನಾನು ಇಲ್ಲಿಂದ ಒಬ್ಬ ವಿಶ್ವಾಸದ ನೌಕರನನ್ನು ಹಾಲನ್ನು ಗ್ರಾಹಕರಿಗೆ ಮುಟ್ಟಿಸಲಿಕ್ಕೆ ಕಳಿಸುತ್ತೇನೆ. ಇಷ್ಟಾದ ಮೇಲೆ ಇನ್ನೇನು ನಿಮ್ಮ ಆಕ್ಷೇಪ ? " ಎಂದು ಡಾಕ್ಟರನನ್ನು ಮತ್ತೆ ನಿರುತ್ತರ ಮಾಡಲಿಕ್ಕೆ ಹವಣಿಸಿದನು.

ಬಳವಂತರಾವ– " ಒಳ್ಳೇದು, ಇಷ್ಟು ತಾವು ಆಸ್ಥೆಯುಳ್ಳವರಾದರೆ ನಾನು ಒಲ್ಲೆನ್ನಲಾರೆ. ಇನ್ನೆರಡು ದಿವಸಗಳ ಮೇಲೆ ನಾನು ಮನೆಯಲ್ಲಿಯ ವ್ಯವಸ್ಥೆ ಮಾಡಿ ಬರುತ್ತೇನೆ " ಎಂದು ಹೇಳಿ ಹೊರಟನು.

ಹೋಗುವಾಗ ಶೇಟಜಿಯು ಬಳವಂತರಾಯನಿಗೆ ಮೂವತ್ತು ರೂಪಾಯಿಗಳನ್ನು ಕೊಟ್ಟನು. ಬಳವಂತರಾಯನು ಎಷ್ಟು ಬೇಡೆಂದರೂ ಅವನು ಕೇಳಲಿಲ್ಲ. ನಿರುಪಾಯನಾಗಿ ರೂಪಾಯಿ ತಕ್ಕೊಂಡು ಬಳವಂತನು ಊರಿಗೆ ಹೋದನು.

ಎಳೂವರೆ ಘಂಟೆಗೆ ಬಳವಂತರಾಯನು ಮನೆಗೆ ಹೋಗಿ ಮುಟ್ಟಿದನು. ಹೋದಕೂಡಲೆ ತನ್ನ ಸಂಧ್ಯೆಯನ್ನು ತೀರಿಕೊಂಡು ಆಕಳುಗಳನ್ನೆಲ್ಲ ಹಿಂಡಿಕೊಂಡನು. ಅಂದಿನ ಬಳವಂತನ ಹಿಗ್ಗಿದ ಮೋರೆಯನ್ನೂ ಹುರುಪನ್ನೂ ನೋಡಿ ರಾಧಾಬಾಯಿಯು ಆಶ್ಚರ್ಯಗೊಂಡಳು. ಊಟವಾದ ನೋಲೆ ಬಳವಂತನು ತಾಯಿಗೆ ಎಲ್ಲ ಕಥೆಯನ್ನು ಹೇಳಿದನು. ತಾಯಿಯೂ " ದೇವರು ಚಲೋಕೆಲಸಕ್ಕೆ ಸಂಧೀಕೊಟ್ಟಿದ್ದಾನೆ. ಬಿಡಬೇಡ " ಎಂದು ಒಳಿತಾಗಿ ಮಗನನ್ನು ಹುರಿಗೊಳಿಸಿದಳು.

೭

## ಧರ್ಮಬಿಟ್ಟರೂ ಸುಖವೆಲ್ಲಿದೆ?





ಮೂರು ದಿವಸಗಳಾದ ನಂತರ ಬಳವಂತರಾಯನು ತನ್ನ ವಚನದ ಪ್ರಕಾರ ಚಂದ್ರಪುರಕ್ಕೆ ಒಂದು ಶೇಟಜಿಗೆ ಭೆಟ್ಟಿಯಾದನು. ಕುಶಲ ಪ್ರಶ್ನೆಗಳಾದ ಕೂಡಲೆ ಶೇಟಜಿಯು— "ಬಳವಂತರಾವ, ನಿಮಗೆ ನಿಮ್ಮ ಗೋಶಾಲೆಯ ಯೋಜನೆಗೆ ಎಷ್ಟು ರೂಪಾಯಿಬೇಕು?" ಎಂದು ಕೇಳಿದನು.

"ಹತ್ತು ಜಾತಿಯ ಆಕಳುಗಳನ್ನು ತರಲಿಕ್ಕೆ ಒಂದು ಸಾವಿರ ರೂಪಾಯಿ; ಗೋಶಾಲೆಯ ಕಟ್ಟಡವನ್ನು ಸುಧಾರಿಸಲಿಕ್ಕೆ ಒಂದು ಸಾವಿರ ರೂಪಾಯಿ; ಸಧ್ಯಕ್ಕೆ ಎರಡುಸಾವಿರ ರೂಪಾಯಿ ಸಾಕು" ಎಂದು ಸ್ವಲ್ಪ ಅನುಮಾನಿಸುತ್ತ ಹೇಳಿದನು.

ಶೇಟಜಿಯು ಕೂಡಲೆ ಎರಡುಸಾವಿರ ರೂಪಾಯಿಗಳಿಗೆ ಒಂದು ಚಕ್ಕು ಬರೆದು ಬ್ಯಾಂಕಿಗೆ ಕಳಿಸಿದನು. ಬಳವಂತರಾಯನು ಈ ಹಣದ ಬಗ್ಗೆ ಒಂದು ಪ್ರಾಮಿಸರಿ ನೋಟು ಬರೆದುಕೊಡುವೆನೆಂದನು. "ಪ್ರಾಮಿಸರೀ ನೋಟೂ ಬೇಡ, ಏನೂಬೇಡ. ನಿಮ್ಮಂಥ ಧ್ಯೇಯವಾದಿಗಳ ಕೈಯಲ್ಲಿ ಬೇಕಾದಷ್ಟು ರೂಪಾಯಿ ಕೊಡಬಹುದು. ಜನರ ಸ್ವಭಾವವು ನನಗೆ ಸ್ವಲ್ಪದರಲ್ಲಿಯೇ ತಿಳಿಯುತ್ತದೆ. ನಿಮಗೆ ಯಾವ ಸಂಕೋಚವೂ ಬೇಡ" ಎಂದನು.

ಈ ಮಾತನ್ನು ಕೇಳಿ ಬಳವಂತರಾಯನಿಗೆ ಬಹಳ ಸಂತೋಷವಾಯಿತು ಅವನು ಕೂಡಲೆ ಗೋಶಾಲೆಯಲ್ಲಿ ಅಂಕಣಕ್ಕೊಂದೊಂದು ವಿಶಾಲವಾದ ಕಿಡಿಕಿಯನ್ನು ಮಾಡಿಸಿದನು. ದನಗಳ ಹೊಲಸು ತೀವ್ರವಾಗಿ ತೊಳೆದು ಹೋಗುವಂತೆ ಇಂಗ್ಲಿಷ V ಆಕಾರದ ಗಟಾರುಗಳನ್ನು ಮಾಡಿಸಿದನು. ದನಗಳಿಗೆ ಬೇಯಿಸಿದ ಅನ್ನವನ್ನು ಹಾಕುವ ಪರಿಪಾಠವನ್ನು ನಿಲ್ಲಿಸಿ

ದನು. ಇನ್ನುಮುಂದೆ ಕಟುಕರ ಕೈಯಿಂದ ಶಿಕ್ಕಶಿಕ್ಕ ಆಕಳುಗಳನ್ನು ಕೊಳ್ಳದೇ ಜಾತಿಯ ಆಕಳುಗಳನ್ನೇ ಕೊಳ್ಳುವ ನಿರ್ಧಾರಮಾಡಿ ತಾನೇ ಸ್ವತಃ ಗುಜರಾಥಕ್ಕೂ ಮಾಳವಾಕ್ಕೂ ಹೋಗಿ ಹತ್ತು ಉತ್ತಮ ಆಕಳುಗಳನ್ನು ಕೊಂಡು ತಂದನು. ಗೋಶಾಲೆಯ ಸ್ವಚ್ಛತೆಯ ವಿಷಯಕ್ಕೆ ಅವನು ತುಂಬಾ ಗಮನವನ್ನು ಕೊಟ್ಟನು. ಹಾಲುಹಿಂಡುವವರ ಕೈಗಳೂ ಪಾತ್ರೆಗಳೂ ಹಾಕಿಕೊಂಡ ವಸ್ತ್ರಗಳೂ ಝಳ ಝಳವಿರುವಂತೆ ಕಟ್ಟು ಮಾಡಿದನು. ಅವನು ಸ್ವತಃ ಎಷ್ಟೋಸಾರೆ ಹಾಲುಹಿಂಡಿ ಇಲ್ಲವೆ ದನಗಳ ಮೈತೊಳೆದು ತೋರಿಸಿದನು. ಮೊದಮೊದಲು ಗೋಶಾಲೆಯ ಮೇಲ್ವಿಚಾರಕನಾದ ರಾಮದಾಸನು "ಇವನಾರಪ್ಪಾ ನಮ್ಮೆಲ್ಲರ ಮೇಲೆ ಅಧಿಕಾರ ನಡೆಯಿಸುವವನು!" ಎಂದು ಸ್ವಲ್ಪ ರೇಗಿದನು. ಆದರೆ ಬಳವಂತರಾಯನ ಸ್ವಭಾವವು ಬಹಳ ವಿನಯವುಳ್ಳದ್ದೂ, ಜನರಿಗೆ ಯಾವಾಗಲೂ ಮೆಲುನುಡಿಗಳಿಂದ ಸಂತೋಷಬಡಿಸುವಂಥಾದ್ದೂ ಇದ್ದದರಿಂದ ತುಸುದಿವಸಗಳಲ್ಲಿಯೇ ಇಬ್ಬರೂ ಪ್ರೇಮದಿಂದ ಕೂಡಿಕೊಂಡು ನಡೆಯಹತ್ತಿದರು.

ಆಕಳಹಾಲನ್ನು ಎಮ್ಮೆಯ ಹಾಲಿನ ದರದಂತೆಯೇ ಜನರಿಗೆ ಒದಗಿಸಬೇಕೆಂದು ಬಳವಂತರಾಯನ ಹಂಬಲವು. ಹಾಲನ್ನು ಮಾರದೆ ಧರ್ಮಾರ್ಥ ಕೊಡಬೇಕೆಂದು ಶೇಟಜಿಯ ಅಪೇಕ್ಷೆಯು. ಆದರೆ ಬಳವಂತನು ಇದು ಅವ್ಯವಹಾರ್ಯವೆಂದು ವಿರೋಧ ಮಾಡಿದನು. ಬಡವರಿಗೆ—ತಿಂಗಳಿಗೆ ೨೫ ರೂಪಾಯಿಗಳಿಗಿಂತ ಕಡಿಮೆ ಗಳಿಕೆಯುಳ್ಳ ಮನೆತನಗಳಿಗೆ – ಸಣ್ಣ ಮಕ್ಕಳಿದ್ದ ಪಕ್ಷಕ್ಕೆ ಅವರಿಗೆ ಸಾಲುವಷ್ಟು ಹಾಲನ್ನು ಧರ್ಮಾರ್ಥ ಕೊಡುವಂತೆ ವ್ಯವಸ್ಥೆ ಮಾಡಿದನು. ಸ್ವಲ್ಪ ದಿವಸಗಳಲ್ಲಿ ಜಾತಿಯ ಆಕಳುಗಳ ಸಂಖ್ಯೆಯನ್ನು ಒಂದು ನೂರರ ವರೆಗೆ ಬೆಳೆಯಿಸಿದನು. ಈ ಪ್ರಕಾರ ಊರೊಳಗಿನ ನಾಲ್ಕೈದುನೂರು ಮನೆತನಗಳಿಗೆ ಸ್ವಚ್ಛವಾದ ನಿರ್ದೋಷವಾದ ಆಕಳಹಾಲು ಕೀಲಿಹಾಕಿದ ಪಾತ್ರೆಗಳಲ್ಲಿ ಮನೆಯಲ್ಲಿಯೇ ಶಿಗುವಂತೆ ವ್ಯವಸ್ಥೆ ಮಾಡಿದರು.

ಮೊದಲನೇ ತಿಂಗಳಿಂದ ಎಲ್ಲಾ ವೆಚ್ಚ ಹೋಗಲಾಗಿ ಒಂದು ನೂರು ರೂಪಾಯಿ ಉಳಿಯಹತ್ತಿತು. ಆಗ ಶೇಟಜಿಯು ಬಳವಂತನನ್ನು ಕರೆದು "ಡಾಕ್ಟರರೇ, ಈ ತಿಂಗಳದಿಂದ ನೀವು ತಿಂಗಳಿಗೆ ನೂರು ರೂಪಾಯಿ ಸಂಬಳ

ತಕ್ಕೊಳ್ಳತಕ್ಕದ್ದು. ನಿಮ್ಮ ತಾಯಿಯವರನ್ನು ಕರೆಯಿಸಿ ಇದೇ ಓಣಿಯಲ್ಲಿರುವ ನನ್ನ ಮನೆಯಲ್ಲಿ ವಾಸವಾಗತಕ್ಕದ್ದು'' ಎಂದು ಅಪ್ಪಣೆಕೊಟ್ಟಿದನು.

ಮುಂದೆ ಶೀಘ್ರವೇ ಬಳವಂತನು ರಾಧಾಬಾಯಿಯನ್ನು ಠಂಕಂಪುರದಿಂದ ಕರೆಯಿಸಿಕೊಂಡು ಶೇಟಜಿಯು ಗೊತ್ತುಮಾಡಿದ ಮನೆಯಲ್ಲಿರಹತ್ತಿದನು. ಮೇಲಿಂದ ಮೇಲೆ ಶೇಟಜಿಯನ್ನು ಗೋಶಾಲೆಯನ್ನು ನೋಡಲಿಕ್ಕೆ ಕರೆದುಕೊಂಡು ಹೋಗುತ್ತಿದ್ದನು. ಧಷ್ಟಪುಷ್ಟವಾದ ಆಕಳುಗಳ ಹಿಂಡನ್ನು ನೋಡಿ ಶೇಟಜಿಯು ''ನಿಜವಾಗಿಯೂ ಇದು ಗೋಧನವು. ನಿಮ್ಮಿಂದ ನನ್ನ ದುಡ್ಡಿನ ಯೋಗ್ಯವಿನಿಯೋಗವಾಗಹತ್ತಿತು'' ಎಂದು ಬಳವಂತನಿಗೆ ಧನ್ಯವಾದಗಳನ್ನು ಕೊಡುತ್ತಿದ್ದನು.

* * * * * *

ದೀಪಾವಳಿಯು ಮುಗಿಯಿತು. ಬಳವಂತರಾಯನು ಮನಸೂರ ಹತ್ತರ ಇರುವ ಒಂದು ಹಳ್ಳಿಯಲ್ಲಿ ಕೆಲವು ಒಳ್ಳೇ ಆಕಳುಗಳು ಇರುವವೆಂದು ಕೇಳಿ ಅಲ್ಲಿಗೆ ಹೋದನು ಆಕಳುಗಳನ್ನು ಕೊಂಡು ತಿರುಗಿ ಊರಿಗೆ ಹೊರಡುವ ದಿವಸ ಎಲ್ಲಾ ಲೆಖ್ಖಾಚಾರವಾದ ಮೇಲೆ ಆಕಳುಗಳ ಒಡೆಯನು– ಒಬ್ಬ ವ್ಯಾಪಾರಸ್ಥನು– ಮನಸೂರ ಇನಾಮುದಾರನಾದ ಅಪ್ಪಾಸಾಹೇಬನು ಆತ್ಮಹತ್ಯೆ ಮಾಡಿಕೊಳ್ಳಲಿಕ್ಕೆ ಪ್ರಯತ್ನ ಮಾಡಿದನೆಂದೂ ದೈವವಶಾತ್ ಮರಣದಿಂದ ಪಾರಾದನೆಂದೂ ವರ್ತಮಾನ ಹೇಳಿದನು. ಇದನ್ನು ಕೇಳಿ ಬಳವಂತನ ಮನಸ್ಸಿಗೆ ಸಿಡಿಲು ಒಡೆದಂತಾಯಿತು. ಕೂಡಲೇ ಅವನಿಗೆ ಹತಭಾಗಿನಿ ನರ್ಮದೆಯ ನೆನಪಾಯಿತು. ಆತ್ಮಹತ್ಯೆಯ ಕಾರಣವೇನೆಂಬದನ್ನು ವಿಚಾರಿಸಲಾಗಿ ಒಬ್ಬ ಕ್ರಿಶ್ಚನ್ ಯುವತಿಯ ಸಂಗಡ ನಡೆದ ಪ್ರೇಮವ್ಯವಹಾರವೇ ಕಾರಣವೆಂದೂ ಇದಕ್ಕೂ ಹೆಚ್ಚಿಗೆ ತನಗೆ ಗೊತ್ತಿಲ್ಲವೆಂದೂ ಆ ವ್ಯಾಪಾರಸ್ಥನು ಹೇಳಿದನು. ಕೂಡಲೇ ಆಕಳುಗಳನ್ನು ಆಳುಗಳ ಸಂಗಡ ಚಂದ್ರಪುರಕ್ಕೆ ಕಳಿಸಿ ತಾನು ಮನಸೂರಿಗೆ ಹೋಗಿ ತನ್ನ ಮಿತ್ರನಾದ ಒಬ್ಬ ಪ್ರತಿಷ್ಠಿತ ಗೃಹಸ್ಥನ ಮನೆಯಲ್ಲಿಳಿದುಕೊಂಡನು. ಅವನಿಂದ ಬಳವಂತನಿಗೆ ಮುಂದೆ ಬರೆದ ವೃತ್ತಾಂತವು ತಿಳಿಯಿತು.

ಧರ್ಮಾಂತರ ಮಾಡುವ ಬಗ್ಗೆ ವಿಚಾರಮಾಡುವದಕ್ಕೆ ಅಪ್ಪಾಸಾಹೇಬನು ಒಂದು ವಾರದ ಅವಧಿಯನ್ನು ತಕ್ಕೊಂಡು ಹೋದದ್ದನ್ನು ಹಿಂದೆಯೇ ಹೇಳಿದೆ. ಮುಂದೆ ನಾಲ್ಕು ದಿವಸ ಅಪ್ಪಾಸಾಹೇಬನು ಫ್ಲೋರಾಳ ಮನೆಯ ಕಡೆಗೆ ಹಾಯಲಿಲ್ಲ. ಆದರೆ ಮುಂದೆ ಅವನಿಗೆ ಅವಳ ವಿಯೋಗವು ದುಃಸಹವಾಗಿ ಅದೇ ದಿವಸ ಸಾಯಂಕಾಲ ಅವಳ ಭೆಟ್ಟಿಗೆ ಹೋದನು. ಆ ದಿವಸ ಫ್ಲೋರಾ ಅವನಿಗೆ ವಿಶೇಷ ಪ್ರೇಮವನ್ನು ತೋರಿಸಿ ಪ್ರಣಯ ಸಲ್ಲಾಪಗಳನ್ನು ಮಾಡಿದಳು. ಆದರಿಂದ ಅಪ್ಪಾಸಾಹೇಬನ ಮನಸ್ಸಿನಲ್ಲಿ " ಇಂಥ ಅಮೂಲ್ಯ ಬೆಲೆಯ ಬಾಲಿಕೆಯನ್ನು ಬಿಡಬಾರದು. ಧರ್ಮಹೋದರೂ ಚಿಂತೆಯಿಲ್ಲ. ಹೇಗಾದರೂ ಮಾಡಿ ಇವಳನ್ನು ಮದುವೆಯಾಗಬೇಕು ಇಲ್ಲದಿದ್ದರೆ ನನ್ನ ಬಾಳುವೆಯು ನಿರರ್ಥಕವು" ಎಂಬ ವಿಚಾರಗಳು ತಲೆದೋರಿದುವು. ಅಪ್ಪಾಸಾಹೇಬನು ಆ ದಿವಸ ಮನೆಗೆ ಹೋಗುವಾಗ ಬಾಲಿಕೆಯು " ಇನ್ನೊಮ್ಮೆ ಬರುವಾಗ ಯಾವದೊಂದು ನಿಶ್ಚಯ ಮಾಡದೆ ದಯಮಾಡಿ ಬರಕೂಡದು " ಎಂದು ಎಚ್ಚರಿಕೆಯನ್ನು ಕೊಟ್ಟಳು.

ಮುಂದೆ ಎರಡು ದಿವಸಗಳ ವರೆಗೆ ಅಪ್ಪಾಸಾಹೇಬನು ಫ್ಲೋರಾಳ ಕಡೆಗೆ ಹೋಗಲಿಲ್ಲ. ಹಿಂದೂಧರ್ಮದಲ್ಲಿ ಅವನಿಗೇನೂ ಬಹಳ ವಿಶ್ವಾಸವಿತ್ತೆಂತಲ್ಲ. ಆದರೆ ಧರ್ಮಾಂತರ ಮಾಡಿದ್ದಾದರೆ ತನ್ನ ಆಪ್ತೇಷ್ಟರಿಂದ-ಮಿತ್ರಮಂಡಲಿಯಿಂದ-ಹಿಂದೂಸಮಾಜದಿಂದ-ತಾನು ಬಹಿಷ್ಕೃತನಾಗುವೆನೆಂಬ ವಿಚಾರವು ಅವನನ್ನು ಕಟಿಯುತ್ತಿತ್ತು. ಲೋಕನಿಂದೆಯನ್ನು ಹೇಗೆ ತಡೆಯಬೇಕೆಂಬುದೊಂದೇ ವಿಚಾರ. ಆದರೆ ದ್ವಿತೀಯಪ್ರಾಣಳಾದ ಫ್ಲೋರಾಳನ್ನು ಬಿಟ್ಟು ಜೀವಿಸುವದೆಂತು ? ಹೀಗೆ ಅನೇಕ ರೀತಿಯಿಂದ ವಿಚಾರಮಾಡಿ ಕಡೆಗೆ ಫ್ಲೋರಾಳನ್ನು ಸಂಪಾದಿಸುವದಕ್ಕಾಗಿ ಹಿಂದೂ ಧರ್ಮಕ್ಕೆ ಶರಣುಹೊಡೆಯುವದನ್ನು ನಿಶ್ಚಯಿಸಿದನು.

ಮೂರನೇದಿನವೇ ತನ್ನ ಪ್ರಿಯತಮೆಯ ಬಂಗಲೆಗೆ ಹೋಗಿ ಧರ್ಮಾಂತರ ಮಾಡುವ ತನ್ನ ನಿಶ್ಚಯವನ್ನು ತಿಳಿಸಿದನು. ಕೂಡಲೆ ಫ್ಲೋರಾ ಹಿರಿಹಿರಿ ಹಿಗ್ಗಿ ಕುಣಿದಾಡಹತ್ತಿದಳು. ಅವಳಿಗೆ ಆನಂದವು ಹಿಡಿಸದಂತಾಯಿತು. ಕೂಡಲೆ ಆಕೆ ಈ ಸುದ್ದಿಯನ್ನು ಡೆವ್ಹಿಡ್‌ರಾಯನಿಗೆ ತಿಳಿಸಲು ಅವನು

ಕೂಡಲೆ ಹೊರಗೆ ಬಂದು ಅಪ್ಪಾಸಾಹೇಬನಿಗೆ ಅವನ ಸಸ್ನಿಶ್ಚಯದ ಬಗ್ಗೆ ಧನ್ಯವಾದಗಳನ್ನು ಸಮರ್ಪಿಸಿದನು.

ಮರುದಿವಸವೇ 'ಬಾಪ್ಟಿಸಮ್' ಅಂದರೆ ಪವಿತ್ರ ಜಲಸೇಚನವಿಧಿಯಾಗಿ ಅಪ್ಪಾಸಾಹೇಬನು ಕ್ರಿಶ್ಚನ್ನನಾದನು. ಈ ವಾರ್ತೆಯು ಹಾ ಹಾ ಅನ್ನುವಷ್ಟರಲ್ಲಿ ಮುನಸೂರ ಶಹರಸಲ್ಲೆಲ್ಲ ಹರಡಿತು. ಇನಾಮುದಾರರ ಆಪ್ತೇಷ್ಟರಿಗೂ ಹಿಂದೂ ಧರ್ಮಾಭಿಮಾನಿಗಳಿಗೂ ತುಂಬಾ ವ್ಯಸನವುಂಟಾಯಿತು. ಪಾರ್ವತಿಬಾಯಿಗಂತೂ ಮುಗಿಲೇ ಕಡಿದುಕೊಂಡು ಮೈಮೇಲೆ ಬಿದ್ದಂತಾಯಿತು. ನಮ್ಮ ವಂಶಕ್ಕೆ ಕಡೆತನಕ ಕಲಂಕವನ್ನು ಹಚ್ಚುವ ಪಾಪಿಯು ನನ್ನ ಹೊಟ್ಟೆಯಲ್ಲಿ ಹುಟ್ಟಿದನಲ್ಲಾ— ಎಂದು ಅಸಹ್ಯವಾದ ಕಸಿವಿಸಿಯುಂಟಾಯಿತು ಅವಳಿಗೆ.

ಮುಂದೆ ಅಪ್ಪಾಸಾಹೇಬನು ತನ್ನ ಮನೆಯಲ್ಲಿರುವದನ್ನು ಬಿಟ್ಟು ಫ್ಲೋರಾಳ ಬಂಗಲೆಯ ಸಮೀಪದಲ್ಲಿಯೇ ಒಂದು ಬಂಗಲೆಯನ್ನು ಬಾಡಿಗೆಯಿಂದ ಹಿಡಿದುಕೊಂಡು ಅಲ್ಲಿ ಇರಹತ್ತಿದನು. ಮುಂದೆ ಒಂದೆರಡು ದಿವಸಗಳಲ್ಲಿ ಅವನು ಫ್ಲೋರಾಳಿಗೆ ವಿವಾಹ ದಿನವನ್ನು ಗೊತ್ತುಪಡಿಸಲಿಕ್ಕೆ ಹೇಳಿದನು.

"ಇನ್ನೇನು ? ಅದಕ್ಕೇನಷ್ಟು ತಡ! ಬೇಕಾದಾಗ ಮದುವೆಯ ಸಮಾರಂಭವನ್ನು ಮಾಡಬಹುದು" ಎಂದು ಉತ್ತರಕೊಟ್ಟಳು. ಆದರೆ ಇನಾಮದಾರನು ಅವಸರ ಮಾಡಲು ತನ್ನ ತಂದೆಯನ್ನು ಕೇಳಿ ಒಂದು ತಿಂಗಳಲ್ಲಿಯೇ ವಿವಾಹದಿನವನ್ನು ಗೊತ್ತು ಪಡಿಸುವೆನೆಂದು ಆಶ್ವಾಸನಕೊಟ್ಟಳು.

ಈ ಅವಧಿಯಲ್ಲಿ ಆಕೆ ತನ್ನ ಪ್ರೇಮದಲ್ಲೇನೂ ಕಡಿಮೆಮಾಡಲಿಲ್ಲ. ವಾಙ್ನಿಶ್ಚಯವನ್ನು ಮಾಡಿಕೊಂಡ ಮದುಮಗಳು ಹೇಗೆ ಇರಬೇಕೋ ಆ ಪ್ರಕಾರ ಅಪ್ಪಾಸಾಹೇಬನೊಡನೆ ನಡೆದುಕೊಳ್ಳುತ್ತಿದ್ದಳು. ಅವನಾದರೂ ತನ್ನ ಪ್ರಿಯತಮೆಗೆ—ಸ್ವಲ್ಪ ದಿವಸಗಳಲ್ಲಿಯೇ ತನ್ನ ಕೈಹಿಡಿಯುವ ಪ್ರಿಯತಮೆಗೆ— ದುಡ್ಡನ್ನು ನೀರಿನಂತೆ ವೆಚ್ಚಮಾಡಿ ಗೋಲ್ಡ ರಿಸ್ಟ್‌ವಾಚ್, ಮುತ್ತಿನಸರಗಳು, ಜರದ ಶೀರೆಗಳು, ವಜ್ರದುಂಗುರಗಳು ಮೊದಲಾದ ಅನೇಕ ಬಯಕೆಯ ವಸ್ತುಗಳನ್ನು ಪ್ರೇಮಾತಿಶಯದಿಂದ ಸಮರ್ಪಿಸಿದನು.

ಮೂರನೇಯವರಾರಾದರೂ ಇವರನ್ನು ನೋಡಿದರೆ ಇವರು ತೀವ್ರವೇ ವಿವಾಹಬದ್ಧರಾಗುವರೆಂಬ ವಿಷಯಕ್ಕೆ ಎಳ್ಳಷ್ಟಾದರೂ ಸಂಶಯ ಬರುತ್ತಿರಲಿಲ್ಲ.

ಹೀಗೆ ಒಂದು ತಿಂಗಳು ಹೋಯಿತು. ಅಮೇಲೆ ಅಪ್ಪಾಸಾಹೇಬನು ಮದುವೆಯ ಪ್ರಸ್ತಾಪ ತೆಗೆದನು. ಫ್ಲೋರಾ ಸವಿಸವಿ ಮಾತುಗಳನ್ನಾಡಿ ಮತ್ತೆ ಮುಂದೆ ಹಾಕುವ ಧೋರಣವನ್ನೇ ಹಿಡಿದಳು. "ನಮ್ಮ ಅಪ್ಪನು ಇಷ್ಟೇಕೆ ಅವಸರವೆಂದು ಅನ್ನುತ್ತಿದ್ದಾನೆ. ನಾನಾದರೂ ಏನು ಮಾಡಲಿ' ಮದುವೆಯಾದ ಕೂಡಲೆ ನಾನು ಅವನಿಂದ ಅಗಲಿ ದೂರವಾಗುವೆನೆಂದು ಅವನಿಗೆ ಅಂಜಿಕೆ, ಅದ್ದರಿಂದ ತೀವ್ರವೇ ನನ್ನ ಮದುವೆಮಾಡಿಕೊಡಲಿಕ್ಕೆ ಅವನ ಮನಸ್ಸು ಒಪ್ಪಲೊಲ್ಲದು. ನಾನು ಎಷ್ಟೆಂತ ಹೇಳಲಿ?" ಎಂದು ಅಪ್ಪಾಸಾಹೇಬನಿಗೆ ಹೇಳುತ್ತಿದ್ದಳು. ಈ ಯುಕ್ತಿವಾದವು ಸಮರ್ಪಕವಾದ್ದರಿಂದ ಅಪ್ಪಾಸಾಹೇಬನು ಬಹಳ ಹಟಹಿಡಿಯದೆ ಇಂದಿಲ್ಲ ನಾಳೆ ಆದೀತೆಂದು ಸುಮ್ಮನೆ ಕೂತನು.

ಈ ಪ್ರಕಾರ ಮತ್ತೊಂದು ತಿಂಗಳು ಕಳೆಯಿತು. ಈಗ ಮಾತ್ರ ಇನಾಮುದಾರನು ಸ್ವಲ್ಪ ಗಾಬರಿಯಾದನು. ಅವನು ಫ್ಲೋರಾಗೆ 'ನೀನೇನು ನನಗೆ ಆಟ ಆಡಿಸುತ್ತಿರುವಿಯೋ? ಹೀಗೆ ಎಷ್ಟು ದಿವಸ ನಾನು ಹಾದೀ ನೋಡಬೇಕು?' ಎಂದು ಸ್ವಲ್ಪ ಸಿಟ್ಟಿಗೇಳಲು ಆಕೆ ಕೂಡಲೆ ತನ್ನ ತಂದೆಯ ಕಡೆಗೆ ಹೋಗಿ ಇನ್ನೊಂದು ತಿಂಗಳೊಳಗಾಗಿ ಮದುವೆಯ ದಿನವನ್ನು ನಿಶ್ಚಯವಾಗಿ ಗೊತ್ತುಪಡಿಸುವೆನೆಂದು ಹೇಳಿ, ಅವನಿಂದ ವಚನವನ್ನು ತಕ್ಕೊಂಡು ಬಂದು ಅಪ್ಪಾಸಾಹೇಬನಿಗೆ ತಿಳಿಸಿದಳು. ಆಗ ಅವನ ಆನಂದಕ್ಕೆ ಪಾರಾವಾರವಿಲ್ಲದಾಯಿತು. ಇದೇ ಸಂಧಿಯನ್ನು ಸಾಧಿಸಿ ಫ್ಲೋರಾ ಅವನಿಂದ ಮತ್ತೆ ನೂರಾರು ರೂಪಾಯಿಗಳನ್ನೆತ್ತಿದಳು. ದಿವಸಗಳು ಹೋಗ ಹತ್ತಿದವು. ವಿವಾಹದಿನವು ಎರಡು ಮೂರು ದಿವಸ ಇರುತ್ತಿರಲಿಕ್ಕೆ ತನ್ನ ಅಬಚಿಗೆ ಬಹಳ ಜಡ್ಡಾಗಿದ್ದುದರಿಂದ ತನಗೆ ಕೂಡಲೇ ಹೋಗಬೇಕಾಗಿದೆಯೆಂದು ಹೇಳಿ ಆಕೆ ವಿರಜಿಗೆ ಹೊರಟುಹೋದಳು.

ಮುಂದೆ ಆಕೆ ತಿರುಗಿ ಮನಸೂರಿಗೆ ಬರಲಿಕ್ಕೆ ಹದಿನೈದು ದಿವಸಗಳು ಹಿಡಿದವು. ಆಕೆ ಬಂದಕೂಡಲೆ ಅಪ್ಪಾಸಾಹೇಬನು ಅವಳಿಗೆ ಭೆಟ್ಟಿಯಾಗಿ

ಮದುವೆಯ ಮಾತು ತೆಗೆದನು. ಫ್ಲೋರಾ ಬಿಕ್ಕಿಬಿಕ್ಕಿ ಅಳಹತ್ತಿದಳು. ಹೀಗೆ ಯಾಕೆಂದು ಕೇಳಲಾಗಿ ಆಕೆ–

"ಯಾಕೆ ಯೆಂದು ಕೇಳುತ್ತೀರಾ! ನಿಮಗೆ ನಾಚಿಕೆ ಬರುವದಿಲ್ಲವೇ; ಇಂಥ ಮುಗ್ಧ ಬಾಲಿಕೆಯನ್ನು ಮೋಸಗೊಳಿಸಲಿಕ್ಕೆ" ಗದ್ದರಿಸಿದಳು.

ಅಪ್ಪಾಸಾಹೇಬನಿಗೆ ಇದರ ಅರ್ಥವೇ ತಿಳಿಯಲಿಲ್ಲ. ಅವನು ಗಾಬರಿಯಾಗಿ "ಅದೇಕೆ? ನಾನು ಮೋಸಗೊಳಿಸಿದೇನೇ! ಅದು ಹೇಗೆ?" ಎಂದು ಕೇಳಿದನು.

"ಇನ್ನೂ ಹೇಗೆ ಮೋಸವೆಂದು ಕೇಳುವಿರಾ? ನಿಮಗೆ ಮದುವೆಯ ಇಬ್ಬರು ಹೆಂಡರು ಇರುತ್ತಿರಲಿಕ್ಕೆ ನನ್ನನ್ನು ಮದುವೆಯಾಗುವೆನೆಂದು ನನಗೆ ಹುಚ್ಚು ಹಿಡಿಸಿದಿರಲ್ಲ? ನಿಮಗೆ ಧಿಕ್ಕಾರವಿರಲಿ" ಎಂದು, ಕೆರಳಿದ ಹೆಣ್ಣುಹುಲಿಯಂತೆ ಗರ್ಜನೆ ಮಾಡಿದಳು.

"ಫ್ಲೋರಾ, ನನಗೆ ಇಬ್ಬರು ಹೆಂಡರು ಇದ್ದದ್ದು ನಿಮ್ಮಪ್ಪನಿಗೆ ಗೊತ್ತಿಲ್ಲವೇ? ಗೊತ್ತು ಇದ್ದೂ ಇದ್ದೂ ನೀವೇ ನನಗೆ ಮದುವೆಯ ಹುಚ್ಚು ಹಿಡಿಸಿ ಮೂಗಿಗೆ ತುಪ್ಪಾ ಹಚ್ಚಿ ಕೂಡ್ರಿಸಿದಿರಿ. ನನ್ನನ್ನು ಕ್ರಿಶ್ಚನನಾಗಿ ಮಾಡುವದಕ್ಕೋಸ್ಕರ ನೀವಿಬ್ಬರೂ ಈ ಕಪಟನಾಟಕವನ್ನು ಹೂಡಿದಂತೆ ನನಗಂತೂ ಕಾಣುತ್ತದೆ. ಇಷ್ಟು ದಿವಸ ನನಗೆ ಸುಳ್ಳು ಆಸೆ ಹಚ್ಚಿದ್ದು ಏಕೆ?" ಎಂದು ಅಪ್ಪಾಸಾಹೇಬನು ನೈರಾಶ್ಯದ ಕೋಪದಿಂದಲೂ ಕಳವಳದಿಂದಲೂ ಉಸುರಿದನು.

"ಅಪ್ಪನ ಮೇಲೆ ಸುಳ್ಳುದೋಷಾರೋಪ ಮಾಡುತ್ತೀರಾ? ಹೀಗೆ ಮಾತಾಡಲಿಕ್ಕೆ ನಿಮಗೆ ನಾಲಿಗೆಯಾದರೂ ಹೇಗೆ ಏಳುತ್ತದೆ? ನೀವು ವಿಶ್ವಾಸಪಾತ್ರರಲ್ಲವೆಂದು ನನ್ನ ನಿಶ್ಚಯವಾಯಿತು. ನಡೆಯಿರಿನ್ನು ನನ್ನ ಮನೆಯಿಂದ" ಎಂದು ಫ್ಲೋರಾಳು ಗುಡುಗು ಹಾಕುವಷ್ಟರಲ್ಲಿ ಡೇವ್ಹಿಡ್ ರಾಯನು ಈ ಗದ್ದಲಕೇಳಿ ಅಲ್ಲಿಗೆ ಬಂದನು. ಅವನು ಅಪ್ಪಾಸಾಹೇಬನ ಮೇಲೆ ಒಳಿತಾಗಿ ಏರಿ ಹೋದನು. ಅವರಿಗೂ ಅಪ್ಪಾಸಾಹೇಬನಿಗೂ ಚನ್ನಾಗಿ ಮಾತಿನ ಜಗಳವಾಯಿತು. ಒಬ್ಬರನ್ನೊಬ್ಬರು ಬೈದುಕೊಂಡರು. ಕಡೆಗೆ ಅಪ್ಪಾಸಾಹೇಬನನ್ನು ಮನೆಯಿಂದ ಹೊರಗೆ ಹಾಕಿದರು.

ಹತಾಶರಾಗಿ ಮೋರೆಯನ್ನು ಬಾಗಿಸಿಕೊಂಡು ಅಪ್ಪಾಸಾಹೇಬನು ತನ್ನ ಬಂಗಲೆಗೆ ಬಂದನು. ತನ್ನನ್ನು ಕ್ರಿಶ್ಚನ್ನನನ್ನಾಗಿ ಮಾಡುವದಕ್ಕಾಗಿ ಇವರೆಲ್ಲರೂ ಕೂಡಿ ಮೋಸಗೊಳಿಸಿದರೆಂದು ಅವನಿಗೆ ತುಂಬಾ ಕಷ್ಟವಾಯಿತು. ಅತ್ತ ಧರ್ಮಾಂತರ ಮಾಡಿದ್ದಕ್ಕೆ ಸಮಾಜದ ರೋಷ; ಇತ್ತ ಫ್ಲೋರಾಳ ಮನೆಯಿಂದ ಅರ್ಧಚಂದ್ರಾಕೃತಿ. ಈ ವಿಚಾರ ಮಾಡಿ ಮಾಡಿ ಅವನಿಗೆ ಜೀವನವೇ ಬೇಸರವೆನಿಸಹತ್ತಿತು. ಆತ್ಮಹತ್ಯೆಯನ್ನು ಮಾಡಿಕೊಳ್ಳಬೇಕೆಂದು ನಿಶ್ಚಯಿಸಿದನು. ಪೇಟೆಗೆ ಹೋಗಿ ಔಷಧಕ್ಕೆಂದು ಆ ಅಂಗಡಿಯಿಂದ ಸ್ವಲ್ಪ ಈ ಅಂಗಡಿಯಿಂದ ಸ್ವಲ್ಪ ಅಫೀಮನ್ನು ಕೊಂಡುಕೊಂಡು ಬಂದು ತಿಂದು ಮಲಗಿಕೊಂಡನು. ಅವನು ಊಟಕ್ಕೆ ಏಳದ್ದರಿಂದ ಅಡಿಗೆಯವನು ಕರೆಯಹೋಗಲು ಅವನು ಏಳಲಿಲ್ಲ. ಅವನಿಗೆ ಸಂಶಯ ಬಂದಿತು. ಡಾಕ್ಟರರನ್ನು ಕರೆಯಿಸಿದನು. ಅವನ ತಾಯಿಯಾದ ಪಾರ್ವತೀಬಾಯಿಗೂ ಹೇಳಿಕಳುಹಿಸಿದನು. ಡಾಕ್ಟರರು ಒಂದು ಔಷಧೋಪಚಾರ ಮಾಡಿದರು. ಪುತ್ರವಾತ್ಸಲ್ಯದಿಂದ ಪ್ರೇರಿತಳಾಗಿ ಸಮಾಜಬಹಿಷ್ಕಾರಕ್ಕೆ ಹೆದರದೆ ಪಾರ್ವತೀಬಾಯಿಯೂ ಬಂದುಬಿಟ್ಟಳು. ಯೋಗ್ಯ ಔಷಧೋಪಚಾರವಾದ್ದರಿಂದ ಅಪ್ಪಾಸಾಹೇಬನು ಜೀವದಿಂದ ಉಳಿದನು. ಆದರೆ ಆದ ಎಲ್ಲ ಅನರ್ಥಾಪಾತಗಳಿಂದ ಅವನ ಮನಸ್ಸಿನಮೇಲೆಯೂ ಶರೀರದಮೇಲೆಯೂ ಭಯಂಕರ ಪರಿಣಾಮವಾಗಿ ಅವನಿಗೆ ಹೃದ್ರೋಗ ಹತ್ತಿದಂತಾಯಿತು. ಬಹುದಿವಸ ಬೇನೆಯನ್ನನುಭವಿಸಿದವನಂತೆ ಅವನು ನಿಸ್ತೇಜನಾಗಿ ಕಾಣಹತ್ತಿದನು. ಈ ವೇಳೆಯಲ್ಲಿ ಮಾತೆಯಾದ ಪಾರ್ವತೀಬಾಯಿಯ ಶುಶ್ರೂಷೆಯು ಅವನಿಗೆ ಲಭಿಸದಿದ್ದರೆ ಅವನ ಜೀವನಯಾತ್ರೆಯು ಇಲ್ಲಿಗೇ ಮುಗಿದುಹೋಗುತ್ತಿತ್ತು.

ಇದೇ ಸುಮಾರಕ್ಕೆ ಅಪ್ಪಾಸಾಹೇಬನ ಎರಡನೇ ಹೆಂಡತಿಯು ಗಂಡನ ಧರ್ಮಾಂತರದ ಸುದ್ದಿಯನ್ನು ಕೇಳಿ ಹೃದ್ರೋಗದಿಂದ ತೀರಿಕೊಂಡಳು. ದುಃಖಮಯವಾದ ಬಾಳುವೆಯನ್ನು ಒಮ್ಮೆ ನೀಗಿದಳೆಂದು ಪಾರ್ವತೀಬಾಯಿಯೂ ಅವಳ ತವರುಮನೆಯವರೂ ಅಂದುಕೊಂಡರು.

ಇದೇ ಸಂಧಿಯಲ್ಲಿ ಬಳವಂತನು ಅಪ್ಪಾಸಾಹೇಬನಿಗೆ ಭೆಟ್ಟಿಯಾಗಬೇಕೆಂದು ಮನಸೂರಿಗೆ ಬಂದನು. ಅವನಿಗೆ ಎಲ್ಲಿ ಭೆಟ್ಟಿಯಾಗಬೇಕು? ಭೆಟ್ಟಿಯಾದಕೂಡಲೆ ಅವನ ಸಂಗಡ ಏನು ಮಾತಾಡತಕ್ಕದ್ದು? ಎಂದು ವಿಚಾರ

ಮಾಡುತ್ತ ಅವನು ತಿರುಗಾಡುತ್ತ ಊರಹೊರಗೆ ಬಂದನು. ಅಲ್ಲಿ ಒಂದು ಪುರಾತನವಾದ ಈಶ್ವರದೇವಾಲಯವಿತ್ತು. ಹೋಗಿ ದೇವದರ್ಶನ ತಕ್ಕೊಳ್ಳಬೇಕೆಂದು ಒಳಗೆ ಸೇರಿದನು. ಒಳಗೆ ಗಾಢವಾದ ಅಂಧಕಾರ. ಜನರ ಸುಳಿದಾಟ ಕಡಿಮೆಯಿದ್ದದರಿಂದ ಕಣ್ಣು ಕಪ್ಪಡೆಗಳು ಹಾರಾಡುತ್ತಿದ್ದವು ಅದಾಗ್ಯೂ ಇಲ್ಲಿಯ ತನಕ ಬಂದಮೇಲೆ ದೇವರ ದರ್ಶನವಿಲ್ಲದೆ ಹೋಗಬಾರದೆಂದು ಗರ್ಭಾಗಾರದ ವರೆಗೆ ಹೋದನು. ದೇವರ ಹತ್ತಿರ ಮಿಣಿಮಿಣಿ ಉರಿಯುತ್ತಿರುವ ದೀಪದ ಬೆಳಕಿನಲ್ಲಿ ಯಾರೋ ಒಬ್ಬರು ಕೂತದ್ದನ್ನು ನೋಡಿ ಬಳವಂತನು ಬೆಚ್ಚಿಬಿದ್ದನು. ಅವನ ಹೆಜ್ಜೆಯ ಸಪ್ಪಳಕ್ಕೆ ಒಳಗೆ ಕೂತವನು ಮೋರೆಯನ್ನೆತ್ತಿ ಅವನ ಕಡೆಗೆ ನೋಡಿದನು. ಬಳವಂತನು ಕೂಡಲೇ ಅವನ ಗುರ್ತು ಹಿಡಿದು– "ಏನು ಅಪ್ಪಾಸಾಹೇಬ, ಇಲ್ಲಿ ಯಾಕೆ ನೀವು ?" ಎಂದು ಕೇಳಿದನು. ಅವನ ಮನಸ್ಸಿನಲ್ಲಿ ಅಪ್ಪಾಸಾಹೇಬನ ವಿಚಾರವೇ ನಡೆದಿದ್ದದರಿಂದ ಕೂಡಲೆ ಅವನಿಗೆ ಗುರ್ತುಸಿಕ್ಕಿತು.

"ಯಾರು ನೀವು? ನಿಮ್ಮ ಗುರ್ತು ನನಗೆ ಹತ್ತಲಿಲ್ಲ" ಅಪ್ಪಾಸಾಹೇಬನು ಕೇಳಿದನು.

ಬಳವಂತನು– "ನಾನು ಬಳವಂತರಾವ ದೇಶಪಾಂಡೆ. ನನಗೂ ಮಾಧವರಾವ ಜೋಶಿಯವರಿಗೂ ಸಂಬಂಧವದೆ. ತಾವು ಮಾಧವರಾಯರ ಅಳಿಯಂದಿರಲ್ಲವೇ ?" ಎಂದು ತನ್ನ ಪರಿಚಯವನ್ನು ಹೇಳಿದನು.

ಅಪ್ಪಾ– "ಓಹೋ, ಈಗ ಗುರ್ತುಸಿಕ್ಕಿತು. ನೀವು ಪ್ಲೀಡರನರಿ ಕಾಲೇಜಿನಲ್ಲಿ ಕಲಿಯುತ್ತಿದ್ದಿಲ್ಲವೇ ?" ಎಂದು ಪ್ರಶ್ನೆ ಮಾಡಿದನು. ಈ ಪ್ರಕಾರ ಅವರಿಬ್ಬರ ಸಂವಾದಕ್ಕೆ ಪ್ರಸ್ತಾವನೆಯಾಯಿತು.

ಅಪ್ಪಾಸಾಹೇಬನು ಈಗ ತನ್ನ ಸೂಟನ್ನು ಬಿಟ್ಟುಕೊಟ್ಟು ಧೋತರವನ್ನುಟ್ಟುಕೊಂಡಿದ್ದನು. ಅವನ ಮೋರೆಯಮೇಲೆ ಇನ್ನೂ ಜಡ್ಡಿನ ಲಕ್ಷಣವಿತ್ತು. ಮನೆಯಲ್ಲಿ ಕೂತುಕೂತು ಬೇಸತ್ತು ಮನಸ್ಸಿನಲ್ಲಿ ಆರಾಮವಿಲ್ಲದೇ ಅವನು ಬಂಗಲೆಯಿಂದ ಹೊರಬಿದ್ದನು. ಶಾರೀರಿಕ ಹತ್ಯೆಯಿಂದ ಅವನು ಉಳಿದಿದ್ದರೂ ಅವನಿಗೆ ಮಾನಸಿಕ ಹತ್ಯೆಯಾದಂತಾಗಿತ್ತು. ಪ್ಲೋರಾಳ ವರ್ತನದ ವಿಷಯಕ್ಕೆ ಅವನಿಗೆ ಹೇಸಿಗೆಯುಂಟಾಗಿತ್ತು. ಆಕೆ

ಮೊದಲಿನಿಂದಲೂ ತನಗೆ ಮೋಸಮಾಡುತ್ತ ಒಂದಳೆಂದೂ ತನ್ನಿಂದ ಆದಷ್ಟು ದುಡ್ಡು ಅಪಹರಿಸುವದೇ ಅವಳ ಉದ್ದೇಶವಾಗಿತ್ತೆಂದೂ ಅವನಿಗೆ ತುಂಬಾ ಮನವರಿಕೆಯಾಯಿತು. ಇಬ್ಬರೂ ಕೂಡಿ ಧರ್ಮತ್ಯಾಗವನ್ನು ಮಾಡಿಸಿ ಕ್ರಿಶ್ಚನ್ನ ಸಮಾಜಕ್ಕೆ ಒಬ್ಬ ಹೊಸ ಅನುಯಾಯಿಯನ್ನು ತಂದುಕೊಡುವ ಶ್ರೇಯಸ್ಸನ್ನು ಪಡೆಯಬೇಕೆಂದೂ ಅವರ ಎರಡನೇ ಉದ್ದೇಶವಿರಬಹುದು. ಅಂತೇ ಆಕೆ ಮದುವೆಯ ದಿನವು ಸಮೀಪಕ್ಕೆ ಬರಲು ತನ್ನ ಅಬಚಿಯ ಜಡ್ಡಿನ ನಿಮಿತ್ತದಿಂದ ಹೊರಟುಹೋದಳೆಂದು ಅವನಿಗೆ ಅನಿಸಿತು. ಅಂತೂ ತಾನು ಇಷ್ಟು ತಿಳಿಗೇಡಿ ಹೇಗೆ ಆದೆನೆಂದು ಅವನಿಗೆ ಆಶ್ಚರ್ಯವೂ ಆತ್ಮತಿರಸ್ಕಾರವೂ ತುಂಬಿಬಂದವು. ಇದೇ ವೇಳೆಯಲ್ಲಿ ಅವನಿಗೆ ತನ್ನ ಗತಜೀವನಕ್ರಮವು ಸ್ಮೃತಿ ಪಥಕ್ಕೆ ಬಂತು. ಪುತ್ರರ ಕಪಟವೂ ಸ್ವಾರ್ಥವೂ ಅವನಿಗೆ ಈಗ ಚನ್ನಾಗಿ ಮನಸ್ಸಿಗೆ ಹೊಳೆದುವು? ತಾನು ಅವರ ಸಹವಾಸದಿಂದ ಇನಾಮುದಾರಿಯ ಸಂಪತ್ತನ್ನು ಹಾಳುಮಾಡಿದ್ದಲ್ಲದೆ ವ್ಯಸನಾಧೀನನಾಗಿ ಆರೋಗ್ಯ ಹಾನಿ, ಮಾನಹಾನಿಗಳಿಗೆ ಗುರಿಯಾದೆನೆಂದು ಅವನಿಗೆ ಚನ್ನಾಗಿ ಹೊಳೆದು ಮನಸ್ಸಿನಲ್ಲಿ ಬಹಳ ಪಶ್ಚಾತ್ತಾಪವುಂಟಾಯಿತು.

ಇಂಥ ಮನಃಸ್ಥಿತಿಯಲ್ಲಿ ಸಮೀಪದಲ್ಲಿಯೇ ಒಂದು ದೇವಾಲಯವನ್ನು ನೋಡಿ ಅವನಿಗೆ ಒಳಗೆ ಸೇರಿ ಕುಳಿತುಕೊಳ್ಳುವ ಬುದ್ಧಿಯು ಹುಟ್ಟಿತು. ಅವನು ಗುಡಿಗೆ ಹೋಗದೆ ಎಷ್ಟೋ ವರ್ಷಗಳಾಗಿರಬಹುದು. ಆದರೆ ಈಗ ಮನೋವ್ಯಥೆಯಿಂದಲೂ ಪಶ್ಚಾತ್ತಾಪದಿಂದಲೂ ಮನಸ್ಸು ಹಣ್ಣಾಗಿರುವಾಗ ಅವನಿಗೆ ದೇವಾಲಯದೊಳಗೆ ಹೋಗಿ ದೇವರ ಮುಂದೆ ಕೂಡುವ ಬುದ್ಧಿಯು ಬಾಲ್ಯದ ಸಂಸ್ಕಾರಗಳಿಂದ ಹುಟ್ಟಿರಬಹುದು. ಇಂಥ ಮನಃಸ್ಥಿತಿಯಲ್ಲಿಯೇ ಅವನಿಗೂ ಬಳವಂತನಿಗೂ ಭೆಟ್ಟಿಯಾಗಿ ಮೇಲೆ ಹೇಳಿದಂತೆ ಪ್ರಸ್ತಾವನೆಯಾಯಿತು.

ಸ್ವಲ್ಪ ಹೊತ್ತಿನಮೇಲೆ ಬಳವಂತನು ಕೇಳಿದನು– 'ನೀವು ಇಂಥ ಜಡ್ಡಿನಲ್ಲಿ ಯಾಕೆ ಹೊರಬಿದ್ದಿರಿ?''

ಅಪ್ಪಾಸಾಹೇಬ– '' ಮನೆಯಲ್ಲಿ ಸ್ವಲ್ಪವೂ ಮನಸ್ಸಿಗೆ ಆರಾಮವೆನಿಸಲಿಲ್ಲ. ಆದ್ದರಿಂದ ಹೊರಗೆ ಅಡ್ಡಾಡೋಣ ಅಂತಾ ಬಂದೆ''

ಆ ಮೇಲೆ ಬಳವಂತನು ಅವನಿಗೆ ಸರಳ ಪ್ರಶ್ನೆಮಾಡಿದನು– '' ಅಪ್ಪಾ

ಸಾಹೇಬ, ನೀವು ಕ್ರಿಶ್ಚನ್‌ಧರ್ಮವನ್ನು ಸ್ವೀಕರಿಸುವಾಗ ಹಿಂದೂ ಧರ್ಮದಲ್ಲಿ ಏನೂ ಅರ್ಥವಿಲ್ಲೆಂದು ನಿಮಗೆ ಮನವರಿಕೆಯಾಯಿತೋ ? ''

ಅಪ್ಪಾ– ನಾನು ಧರ್ಮದ ವಿಷಯಕ್ಕೆ ಎಂದು ವಿಚಾರ ಮಾಡಿದ್ದೆ ? ನನಗೆ ಹಿಂದೂ ಧರ್ಮವೂ ಗೊತ್ತಿಲ್ಲ. ಕ್ರಿಶ್ಚನ್ನ ಧರ್ಮವಂತೂ ಮೊದಲೇ ಗೊತ್ತಿಲ್ಲ. ಎರಡೂ ಮೂರು ಸಾರೆ ಚರ್ಚಿಗೆ ಹೋಗಿರಬಹುದು, ಅಷ್ಟೇ. ನಾನು ಆ ನಾಟಕೀ ಬಾಲೆಯ ಬಲೆಗೆಬಿದ್ದು ನನ್ನ ಧರ್ಮಕ್ಕೂ ನನ್ನ ಆಪ್ತೇಷ್ಟರಿಗೂ ಹಿಂದೂ ಸಮಾಜಕ್ಕೂ ಎರವಾದೆ. ಇನ್ನು ಮುಂದೆ ಊರ ಜನರು ನನಗೆ ಕುಡಿಯಲಿಕ್ಕೆ ನೀರು ಸಹ ಕೊಡುವದಿಲ್ಲ. ನನ್ನ ತಾಯಿಯು ಲೋಕನಿಂದೆಗೆ ಬೆದರದೆ ನನ್ನ ಶುಶ್ರೂಷೆ ಮಾಡದಿದ್ದರೆ ಈಗ ತನಗೆ ನನ್ನ ಭೆಟ್ಟಿ ಆಗುತ್ತಲೇ ಇರಲಿಲ್ಲ '' ಎಂದು ಬಹಳ ಚಡಪಡಿಕೆಯಿಂದ ಉಸುರಿದನು.

ಬಳವಂತನು– '' ಹಾಗಾದರೆ ಕ್ರಿಶ್ಚನ್ನ ಧರ್ಮಬಿಟ್ಟು ತಿರುಗಿ ಹಿಂದೂ ಧರ್ಮಕ್ಕೆ ಬರುವಿರಾ ? ''

ಅಪ್ಪಾ– '' ಇನ್ನು ಅದು ಆಗದ ಮಾತು. ಯಾಕಂದರೆ ಹಿಂದೂ ಧರ್ಮವನ್ನು ಒಮ್ಮೆ ಬಿಟ್ಟು ಹೋದವನಿಗೆ ತಿರುಗಿ ಅಲ್ಲಿ ಪ್ರವೇಶವಿಲ್ಲ. ನಾನೆಲ್ಲಾ ತಿರುಗಿ ಹಿಂದೂ ಧರ್ಮಕ್ಕೆ ಸೇರಬೇಕೆಂದರೂ ನನ್ನನ್ನು ಕರೆದುಕೊಳ್ಳುವವರಾರು ? ಅಂದಮೇಲೆ ಅದರ ಮಾತೇಕೆ ? '' ಎಂದು ಕಳವಳ ದನಿಯಿಂದ ಉಸುರ್ಗರೆದನು.

ಬಳವಂತನು– '' ಪುರಾಣ ಮತವಾದಿಗಳು ನಿಮ್ಮನ್ನು ತಿರುಗಿ ಹಿಂದೂ ಧರ್ಮದಲ್ಲಿ ಸೇರಿಸಿಕೊಳ್ಳುವದಿಲ್ಲವೆಂಬುದೇನೋ ನಿಜ. ಆದರೆ ಸುಧಾರಕರು ನಿಮ್ಮನ್ನು ತಿರುಗಿ ಕರೆದುಕೊಳ್ಳುವರು. ಅದು ಹಾಗೇ ಇರಲಿ. ನಿಮ್ಮನ್ನು ತಿರುಗಿ ಧರ್ಮದಲ್ಲಿ ಕೂಡಿಸಿಕೊಳ್ಳುವ ಹೊಣೆಯು ನನ್ನದೆಂದು ತಿಳಿಯಿರಿ. ಆ ಮೇಲೆ ನಿಮ್ಮ ಅಭಿಪ್ರಾಯವೇನು ? '' ಎಂದು ಕೇಳಿದನು.

ಅಪ್ಪಾ– '' ನಿಮ್ಮ ಮಾತಿನ ಮೇಲೆ ವಿಶ್ವಾಸವಿಟ್ಟು ನಾನೇನೋ ಬರಬಹುದು. ಆದರೆ ಒಬ್ಬ ಕ್ರಿಶ್ಚನ್ನ ಯುವತಿಗಾಗಿ ಧರ್ಮಾಂತರ ಮಾಡಿದ ನೀಚನೆಂದು ಎಲ್ಲರೂ ಕಡೆತನಕ ನನ್ನ ಕಡೆಗೆ ತಿರಸ್ಕಾರದಿಂದ ಬೊಟ್ಟು ಮಾಡಿ ತೋರಿಸುವರು. ಅವರೊಳಗೆ ಅಪಮಾನವನ್ನು ಹೊಂದಿ ಬಾಳುವ

ದಕ್ಕಿಂತ ಈಗ ಇದ್ದಂತೆಯೇ ಎಲ್ಲಿಯಾದರೂ ಕಾಲಹಾಕಬೇಕೆಂದು ನನಗೆ ಅನಿಸುತ್ತದೆ''

ಬಳವಂತ- ''ಛೇ, ಛೇ, ಹಾಗಲ್ಲ. ನೀವು ಈಗ ಕ್ರಿಶ್ಚನ್ನರಾಗಿ ಉಳಿದರೇ ನೀವು ಜೀವದಿಂದಿರುವ ತನಕ ಜನರು ನಿಮಗೆ ಹೀಯಾಳಿಸುವರು. ಆದರೆ ನೀವು ಹಿಂದುಧರ್ಮಕ್ಕೆ ಪುನಃ ಬಂದರೆ ಕೆಲವು ದಿವಸ ಜನರು ಆಡಿದರೂ ಆಡಿಕೊಳ್ಳಬಹುದು. ಆದರೆ ಮುಂದೆ ಮಾತ್ರ ಒಮ್ಮೆ ನೀವು ಕ್ರಿಶ್ಚನ್ನರಾಗಿದ್ದು ಜನರಿಗೆ ಮರೆತು ಹೋಗಬಹುದು. ಆದ್ದರಿಂದ ಮಾಡಿದ ತಪ್ಪನ್ನು ತೀವ್ರವಾಗಿ ತಿದ್ದಿಕೊಳ್ಳುವದೇ ಉತ್ತಮ ಪಕ್ಷವಲ್ಲವೇ?'' ಎಂದು ಅವನ ಮನಸ್ಸನ್ನು ತಿರುಗಿಸಲಿಕ್ಕೆ ಪ್ರಯತ್ನ ನಡೆಯಿಸಿದನು.

ಕಡೆಗೆ ಬಳವಂತರಾಯನ ಮಾತಿಗೆ ಅಪ್ಪಾಸಾಹೇಬನು ಸಮ್ಮತಿಸಿದನು. ಅವಶ್ಯವಾದ ಎಲ್ಲ ಪ್ರಾಯಶ್ಚಿತ್ತಹೋಮಗಳು ನಡೆದು ಅಪ್ಪಾಸಾಹೇಬನು ತಿರುಗಿ ಹಿಂದೂ ಧರ್ಮದೊಳಗೆ ಪೂರ್ವದಂತೆ ಸೇರಿಕೊಂಡನು. ಇನ್ನು ಸಾರ್ಜಂಟಬಾಯಿಯವರ ಆನಂದಕ್ಕೆ ಎಣೆಯಿಲ್ಲದಾಯಿತು. ಇನ್ನು ಮೇಲೆ ಕೆಲವುದಿವಸಗಳವರೆಗೆ ಅಪ್ಪಾಸಾಹೇಬನು ಮುನಸೂರು ಶಹರವನ್ನು ಬಿಟ್ಟು ಎರಡನೇ ಕಡೆಗೆ ಇರುವದೇ ಹಿತವೆಂದು ಎಲ್ಲರ ಅಭಿಪ್ರಾಯವಾಗಿ ಬಳವಂತರಾಯನು ಅವನನ್ನು ಕರೆದುಕೊಂಡು ಚಂದ್ರಪುರಕ್ಕೆ ಬಂದನು. ಬಂದ ಮೇಲೆ ಆದ ಸಂಗತಿಯನ್ನೆಲ್ಲ ರಾಧಾಬಾಯಿಗೆ ಏಕಾಂತದಲ್ಲಿ ತಿಳಿಸಿದನು. ರಾಧಾಬಾಯಿಯೂ ಹಿಂದಿನ ಯಾವ ಮಾತನ್ನೂ ತೆಗೆಯದೆ ಅಪ್ಪಾಸಾಹೇಬನನ್ನು ಅವನೊಬ್ಬ ಮಗನಂತೆ ಪ್ರೀತಿ ವಿಶ್ವಾಸಗಳಿಂದ ನೋಡಹತ್ತಿದಳು.

ಅಪ್ಪಾಸಾಹೇಬನು ಮನೆಯಲ್ಲಿ ಒಬ್ಬನೇ ಇದ್ದರೆ ಅವನಿಗೆ ಪೂರ್ವಜೀವನದ ನೆನಪಾದೀತೆಂದು ಬಳವಂತರಾಯನು ಅವನನ್ನು ದಿನಾಲು ಗೋಶಾಲೆಗೆ ಕರೆದುಕೊಂಡು ಹೋಗಹತ್ತಿದನು. ಅಲ್ಲಿ ನಡೆಯುತ್ತಿರುವ ಕಾರ್ಯಕಲಾಪಗಳಲ್ಲಿ ಅವನ ಮನಸ್ಸು ಉಲ್ಲಾಸವನ್ನು ಕಾಣಹತ್ತಿತು. ಬರಬರುತ್ತ ಅವನೂ ಗೋಶಾಲೆಯ ಕೆಲಸದ ಜ್ಞಾನವನ್ನು ಮಾಡಿಕೊಂಡು ಬಳವಂತರಾಯನಿಗೆ ಸಹಾಯವಾಗಹತ್ತಿದನು.

ಮುಂದೆ ತೀವ್ರವೇ ನಾತಾಳಿಯ ರಜೆಯು ಬಂತು. ಆಗ ಬಳವಂತ

ರಾಯನು ಬಳ್ಳಾರಿಗೆ ಪತ್ರಬರೆದು ರಾಮರಾಯನನ್ನೂ ಅವನ ಹೆಂಡತಿ ಶಾರದೆಯನ್ನೂ ಬರಮಾಡಿಕೊಂಡನು. ಇವರೆಲ್ಲರೂ ಕೂಡಿದ ಮೇಲೆ ಮನೆಯಲ್ಲಿ ವಿವಿಧ ವಿಷಯಗಳ ಮೇಲೆ ಚರ್ಚೆಗಳು ನಡೆಯುತ್ತಿದ್ದವು. ಅಪ್ಪಾಸಾಹೇಬನು ಅವುಗಳನ್ನೆಲ್ಲ ಕೇಳುತ್ತಿರಲು ತನ್ನ ಹಳೆಯ ಗೆಳೆಯರಿಗೂ ಹೊಸ ಗೆಳೆಯರಿಗೂ ಎಷ್ಟು ವ್ಯತ್ಯಾಸವಿದೆಯೆಂಬುದು ಅವನಿಗೆ ಕಂಡು ಬಂತು. ತಾನು ಇಷ್ಟು ದಿವಸ ಆಯುಷ್ಯವನ್ನು ವ್ಯರ್ಥವಾಗಿ ಕಳೆದೆನೆಂದು ಅವನಿಗೆ ಮನಸ್ಸಿನಲ್ಲಿ ಕಟಿಯಹತ್ತಿತು. ತನ್ನ ವಿಚಾರಗಳೂ ಜ್ಞಾನವೂ ಅವರೆಲ್ಲರ ಮುಂದೆ ಎಷ್ಟು ಹಾಸ್ಯಾಸ್ಪದವಾಗಿದೆಯೆಂಬದನ್ನು ತಿಳಿದು ಅವನು ತುಂಬಾ ನಾಚಿಗೊಂಡನು. ಬರಬರುತ್ತ ಅವನಿಗೆ ಪುಸ್ತಕಗಳನ್ನೂ ವರ್ತಮಾನಪತ್ರಗಳನ್ನೂ ಓದುವ ಅಭಿರುಚಿ ಹುಟ್ಟಿತು. ಇದನ್ನು ನೋಡಿ ಬಳವಂತನು ಅವನಿಗೆ ವಾಚನಾಲಯದಿಂದ ಒಳ್ಳೇ ಪುಸ್ತಕಗಳನ್ನು ತಂದು ಕೊಡಹತ್ತಿದನು. ಈ ಪ್ರಕಾರ ಅಪ್ಪಾಸಾಹೇಬನ ಜೀವನಕ್ರಮದಲ್ಲಿ ದೊಡ್ಡದೊಂದು ಕ್ರಾಂತಿಯಾಗಿ ಬೇರೊಂದು ಆನಂದಮಯವಾದ ಲೋಕದಲ್ಲಿ ತಾನು ಸೇರುವಂತೆ ಅವನಿಗೆ ಭಾಸವಾಗಹತ್ತಿತು.

ಅಪ್ಪಾಸಾಹೇಬನು ಬಂದು ತಿಂಗಳ ಮೇಲಾಗಿದ್ದರೂ ಅವನೆದುರಿಗೆ ಯಾರೂ ಸರ್ಮದೆಯ ಸುದ್ದಿಯನ್ನೇ ಎತ್ತಲಿಲ್ಲ. ಯಾರಾದರೂ ತೆಗೆಯಬಹುದೆಂದು ಅವನ ಭರವಸೆಯಿತ್ತು. ಆದರೆ ಎಲ್ಲರೂ ಮಾತಾಡಿಕೊಂಡಂತೆ ಆ ವಿಷಯವಾಗಿ ಮೌನವ್ರತವನ್ನೇ ತಾಳಿದ್ದರು. ಕಡೆಗೆ ಅಪ್ಪಾಸಾಹೇಬನು ಬೇಸತ್ತು ಒಂದು ದಿವಸ ಬಳವಂತರಾಯನೇ ಕುಳಿತಾಗ “ಜೋಶಿಮಾಧವರಾಯರ ವರ್ತಮಾನವೇನು ?” ಎಂದು ಪ್ರಶ್ನೆ ಮಾಡಿದನು.

ಅವನ ಮನಸ್ಸಿನೊಳಗಿನ ಭಾವವನ್ನು ತಿಳಿದುಕೊಂಡು ಬಳವಂತನು ಸರ್ಮದೆಯ ವೃತ್ತಾಂತವನ್ನೆಲ್ಲ ಹೇಳಿ– “ಅಪ್ಪಾಸಾಹೇಬ, ನೀವು ಸರ್ಮದೆಯನ್ನು ಬಿಟ್ಟದ್ದು ಬಹಳೇ ದೊಡ್ಡ ತಪ್ಪು” ಎಂದನು.

ಅಪ್ಪಾ– “ನಾನೇನು ಮಾಡಲಿ? ನಮ್ಮ ಹಿರಿಯರ ತಪ್ಪು. ಅವರೇ ಆ ಜೋಯಿಸನ ಮೇಲೆ ವಿಶ್ವಾಸಟ್ಟು ಆಕೆಯನ್ನು ತವರುಮನೆಗೆ ಕಳಿಸಿದರು. ಆ ಮೇಲೆ ಎರಡನೇ ಮದುವೆಯ ಸಡಗರವನ್ನೇನು ಹೇಳಲಿ? ಒಂದು

ಶುದ್ಧ ಹುಚ್ಚಿಯು ಗಂಟುಬಿದ್ದಿತ್ತು. ಆಕೆ ಒಳಗಡೆ ತೀರಿ ಹೋದದ್ದರಿಂದ ನನ್ನನ್ನೂ ಪಾರುಮಾಡಿದಳು; ತಾನೂ ಪಾರಾದಳು "

ಬಳವಂತ– " ಎರಡನೇ ಹೆಂಡತಿಯ ವಿಷಯ ನಿಮಗೇ ಗೊತ್ತು. ಆದರೆ ನರ್ಮದೆಯನ್ನು ಬಿಟ್ಟಂದಿನಿಂದ ನಿಮಗೆ ಸುಖವೇ ಇಲ್ಲ. ಅಪ್ಪಾಸಾಹೇಬ, ಅವಳ ಸ್ವಭಾವ ನಿಮಗೆ ಗೊತ್ತಿಲ್ಲ. ಆಕೆ ಒಂದು ದೇವತೆ. ನೀವು ಆಕೆಯನ್ನು ಹೊರಗೆ ದೂಡಿದರೂ ಆಕೆ ನಿಮ್ಮ ಸಲುವಾಗಿ ಇನ್ನೂವರೆಗೂ ತಪಸ್ಸು ಮಾಡುತ್ತಾ ಕೂತಿದ್ದಾಳೆ. ಅಂಥ ಹೆಂಡತಿ ಸಿಗಬೇಕಾದರೆ ಪೂರ್ವಜನ್ಮದ ಪುಣ್ಯಬೇಕು. " ಎಂದು ಮನಸ್ಸು ಕರಗುವ ದನಿಯಿಂದ ಹೇಳಿದನು.

ಇದನ್ನು ಕೇಳಿ ಅಪ್ಪಾಸಾಹೇಬನ ಕಣ್ಣಿಂದ ಒಂದುಹನಿ ಕಣ್ಣೀರು ತಟಕಿಕ್ಕಿತು. ಅಪರಾಧವಿಲ್ಲದೆ ಹೆಂಡತಿಯನ್ನು ವನಕ್ಕಟ್ಟಿದ ರಾಮನಂತೆ ಅವನ ಅವಸ್ಥೆಯಾಯಿತು. ಎಷ್ಟೊತ್ತಿನವರೆಗೆ ಅವನ ಬಾಯಿಂದ ಶಬ್ದಗಳೇ ಬರಲಿಲ್ಲ. ಆ ಮೇಲೆ ನಿಡಿದಾದ ಬಿಸಿಯುಸಿರನ್ನು ಬಿಟ್ಟು ಅಪ್ಪಾಸಾಹೇಬನು ನುಡಿದನು. " ಬಳವಂತರಾವ, ಹಿಂದೆ ಆದದ್ದನ್ನು ದಯಮಾಡಿ ನನ್ನ ನೆನಪಿಗೆ ತರಬೇಡಿರಿ. ನನ್ನ ಮುಂದಿನ ಆಯುಷ್ಯವು ಮಾತ್ರ ನಿಮ್ಮ ಕೈಯಲ್ಲಿಯೇ ಇದೆ. "

ಬಳವಂತ– " ಹಾಗಾದರೆ ಈ ಹೊತ್ತೇ ಮಾಧವರಾಯರಿಗೆ ಪತ್ರಾ ಹಾಕಿ ನರ್ಮದೆಯನ್ನು ಕರೆಕಳಿಸುವೆನು, " ಎಂದು ಹೇಳಿ ಪತ್ರಬರೆದನು. ಪತ್ರದಲ್ಲಿ ಆದ ಸಂಗತಿಯೆಲ್ಲವನ್ನೂ ತಿಳಿಸಿ ಅಪ್ಪಾಸಾಹೇಬರ ಜೀವನದಲ್ಲಿ ಉಂಟಾದ ಕ್ರಾಂತಿಯನ್ನೂ ಬಣ್ಣಿಸಿದನು. ಮಾಧವರಾಯರಿಗೆ ಮೊದಲೇ ನರ್ಮದೆಯ ಮೇಲೆ ಪ್ರೀತಿಕಡಿಮೆ. ರಂಗೂಬಾಯಿಯ ಚಾಡಿಗಳಿಂದ ಅವರ ಮನಸ್ಸು ಮತ್ತಷ್ಟು ಕಲುಷಿತವಾಗಿತ್ತು. ಆದ್ದರಿಂದ ಇದೊಂದು ದೇವರೇ ದಯಪಾಲಿಸಿದ ಬಿಡುಗಡೆಯೆಂದು ತಿಳಿದುಕೊಂಡು, ಕೂಡಲೇ ನರ್ಮದೆಯನ್ನು ಅಪ್ಪಾಸಾಹೇಬನಲ್ಲಿಗೆ ಅಂದರೆ ಬಳವಂತರಾಯನ ಮನೆಗೆ ಕಳುಹಿಸಿ ಕೊಟ್ಟರು.

ನರ್ಮದೆಯು ಬಂದ ದಿನದಾರಭ್ಯ, ಹಿಂದೆ ಆದದ್ದನ್ನೆಲ್ಲ ಮರೆತವಳಾಗಿ ಗಂಡನ ಸೇವೆಯನ್ನು ಮನಮುಟ್ಟಿ ಮಾಡಹತ್ತಿದಳು. ನರ್ಮದೆಯ ದೈವವು ತೆರೆಯಿತೆಂದು ಎಲ್ಲರೂ ಸಂತೋಷಬಟ್ಟರು.

ಶಾರದೆಯು ತನ್ನ ಗಂಡನಸಂಗಡ ಬಳ್ಳಾರಿಗೆ ಹೊರಡುವಾಗ ತನ್ನ ಕೂಸನ್ನು ನರ್ಮದೆಯ ತೊಡೆಯಮೇಲಿಟ್ಟು "ನರ್ಮದಾ, ಮುಂದಿನ ವರ್ಷ ನಿನ್ನ ಮಗನ ಜಾವಳಕ್ಕೆ ನಮ್ಮೆಲ್ಲರನ್ನು ಕರೆಯಿಸುವಿಯೋ ಇಲ್ಲವೋ?" ಎಂದು ವ್ಯಂಗ್ಯಾರ್ಥದ ಚೇಷ್ಟೆ ಮಾಡಲು ಎಲ್ಲರೂ ನಗುತ್ತಿದ್ದರು.

---

## ೮

## ಪಾಪದ ಮೂರ್ತಿಯು ಎದುರಿಗೆ ಕುಣಿಯಿತು.



ಈ ಪ್ರಕಾರ ಬಳವಂತರಾವ, ಅಪ್ಪಾಸಾಹೇಬ, ಮೊದಲಾದವರು ಚಂದ್ರಪುರದಲ್ಲಿ ಬಹಳ ಸೊಗಸಿನಿಂದ ಕಾಲಕಳೆಯುತ್ತಿರಲಿಕ್ಕೆ ಮಾಘಮಾಸವು ಬಂತು. ಸಾಯಂಕಾಲ ನಾಲ್ಕು ಘಂಟೆಯ ಸಮಯ. ಎಲ್ಲರೂ ಚಹಾ ತೀರಿಸಿಕೊಂಡು ಪಡಸಾಲೆಯಲ್ಲಿ ವರ್ತಮಾನಪತ್ರ ಓದುತ್ತ ಮತ್ತು ಕೇಳುತ್ತ ಕೂತಿದ್ದರು. ಅಷ್ಟರಲ್ಲಿ ಅಂಚೆಯವನು ಒಂದೆರಡು ಕುಂಕುಮಾಂಕಿತ ಪಾಕೀಟುಗಳನ್ನು ಕೊಟ್ಟನು—ಒಂದು ಬಳವಂತರಾಯನಿಗೆ, ಮತ್ತೊಂದು ಅಪ್ಪಾಸಾಹೇಬನಿಗೆ. ಓದಿ ನೋಡಿದರು. ಜೋಶಿ ಮಾಧವರಾಯರ ದತ್ತಕಮಗನಾದ ಗೋಪಾಲರಾಯನ ವಿವಾಹದ ಪತ್ರಿಕೆಗಳು. ಒಬ್ಬ ಮುನಸೀಫನ ಮಗಳನ್ನು ಕೊಟ್ಟು ವಿವಾಹ. ಲಗ್ನಪತ್ರವೆಲ್ಲಾ ಯೋಗ್ಯವಾಗಿತ್ತು. ಆದರೆ ಲಗ್ನಪತ್ರಿಕೆಯ ಕೆಳಗೆ ಕೈಯಿಂದ ಬರೆದ ಪುರವಣಿಯನ್ನು ನೋಡಿ ಬಳವಂತರಾಯನಿಗೂ ಅಪ್ಪಾಸಾಹೇಬನಿಗೂ ಸಿಟ್ಟಿನಿಂದ ಮೈಯೆಲ್ಲ ಉರಿಯ ಹತ್ತಿತು. ಪುರವಣಿಯು ಈ ಪ್ರಕಾರವಿತ್ತು:—

"ನೀನು ನಮ್ಮ ಆಪ್ತನೆಂದು ಲಗ್ನಪತ್ರಿಕೆ ಕಳಿಸಿದೆ. ಆದರೆ ದಯಮಾಡಿ ನೀವಾರೂ ಲಗ್ನಕ್ಕೆ ಬರುವ ತೊಂದರೆ ತೆಗೆದುಕೊಳ್ಳಬಾರದು.

ಯೊಕಂದರೆ ಲಗ್ನಸಮಾರಂಭಕ್ಕೆ ನಮ್ಮ ಪರಮಪೂಜ್ಯ ಗುರುಗಳಾದ ಸಹ ಜಾನಂದರು ಬರುವವರಿದ್ದಾರೆ. ಪರಧರ್ಮದಲ್ಲಿ ಸೇರಿ ಜಾತಿಭ್ರಷ್ಟನಾದ ಅಪ್ಪಾಸಾಹೇಬನ ಸಂಗಡ ಅನ್ನೋದಕ ವ್ಯವಹಾರ ನಡೆಯಿಸಿದ್ದರಿಂದ ನೀನು ಬಂದರೆ ನಮ್ಮ ಲಗ್ನಸಮಾರಂಭವು ಕೆಟ್ಟು ಹೋಗುವದೇ ನಿಶ್ಚಯ. ಆದ್ದರಿಂದ ಈ ವಿನಂತಿಯು ಇತ್ಯಾದಿ. ಇತ್ಯಾದಿ''

ಇದೇ ತಾತ್ಪರ್ಯದ ಪುರವಣಿಯು ಅಪ್ಪಾಸಾಹೇಬನ ಪತ್ರದಲ್ಲಿಯೂ ಇತ್ತು.

ಇದನ್ನು ಓದಿ ಹೇಳಿದ ಕೂಡಲೆ ಎಲ್ಲರಿಗೂ ಸಂತಾಪವಾಯಿತು. '' ಬಂಗಾರದಂಥ ಮಗಳನ್ನೂ (ನರ್ಮದೆಯನ್ನೂ) ಅಳಿಯನನ್ನೂ ಲಗ್ನಕ್ಕೆ ಕರೆಯಿಸಿಕೊಳ್ಳಬಾರದೇ ? ಏನು ಅವಲಕ್ಷಣ ! ಏನು ಧರ್ಮದಹುಚ್ಚು ! '' ಎಂದು ರಾಧಾಬಾಯಿಯು ಹಳಹಳಿಸಿದಳು. ತನ್ನ ತಮ್ಮನ ಲಗ್ನದಂಥ ಮಂಗಲಪ್ರಸಂಗದಲ್ಲಿ ತನಗೆ ಬಹಿಷ್ಕಾರವಾಯಿತೆಂದು ನರ್ಮದೆಯ ಎದೆಯಲ್ಲಿ ಬಾಣವು ನಟ್ಟಂತಾಯಿತು.

'' ಸಾಧುಮಹಾರಾಜರು ಎಂಥಾ ಪುಣ್ಯವಂತರು ಬಲ್ಲಿರಾ ? ನಿಮ್ಮಂಥ ಧರ್ಮಲಂಡ ಪಿತೃಲಂಡ ಜನರಿಗೆ ಅವರು ದರ್ಶನಕೊಡುವರೇ ? ಭಲೆ ಭಲೆ! ಮಾಧವರಾವ! ನಿಮ್ಮ ಧಾರ್ಮಿಕತನಕ್ಕಾಗಿ ನಿಮಗೆ ಯಾವ ಲೋಕಕ್ಕೆ ಕಳಿಸಬೇಕೋ ಎಂದು ದೇವರಿಗೆ ತೊಡಕು ಬಿದ್ದಿದೆ! '' ಎಂದು ಬಳವಂತನು ಚೇಷ್ಟೆ ಮಾಡಿದನು.

ಗೋಪಾಲನ ಲಗ್ನದಿನವು ಒದಗಿಬಂತು. ಸಹಜಾನಂದರು ತಮ್ಮ ಹತ್ತು ಶಿಷ್ಯರೊಂದಿಗೆ ವಧೂವರರಿಗೆ ಆಶೀರ್ವಾದ ಮಾಡಲಿಕ್ಕೆ ಮಾಧವ ರಾಯರ ಮನೆಗೆ ದಯಮಾಡಿಸಿದರು. ಅವರಿಗಾಗಿ ಮಹಡಿಯ ಮೇಲಿನ ಸಭಾಮಂಟಪವು ಕಾದಿಡಲ್ಪಟ್ಟಿತ್ತು. ಸಾಧುಗಳು ಅಂತಿಂಥವರ ಮನೆಗೆ ಬರುವವರಲ್ಲ. ಮಾಧವರಾಯರು ತಮ್ಮ ಪರಮಭಕ್ತರೆಂದು ಅವರಿಗೆ ಅನುಗ್ರಹ ಮಾಡಲು ಬಂದಿದ್ದರು. ಅವರ ವೇಷವೆಷ್ಟು ಭವ್ಯವೆಂದು ಹೇಳಬೇಕು ? ತಲೆಯಲ್ಲಿ ಬೈತಲು ತೆಗೆದು ಸುವಾಸಿಕ ತೈಲವನ್ನು ಹಚ್ಚಿದ ಕೂದಲು. ಹಣೆಯ ಮೇಲೆ ತೀಡಿದ ಕೇಸರೀ ಗಂಧ. ಉಡಲಿಕ್ಕೆ ಹೊತ್ತು ಕೊಳ್ಳಲಿಕ್ಕೆ ಜರದ ಧೋತರುಗಳು. ಕಿವಿಯಲ್ಲಿ ಮುತ್ತಿನಬಾವಲಿ. ಕೈಯಲ್ಲಿ

ಬಂಗಾರದ ರಿಸ್ಟವಾಚ್. ಕೊರಳಲ್ಲಿ ಕಂಠಿ. ಕಾಲಲ್ಲಿ ಮಖಮಲಿನ ಸ್ಲಿಪರು. ಸಾಧು ಮಹಾರಾಜರನ್ನು ನೋಡಿದರೆ ಯಾವ ಸಂಸ್ಥಾನದ ಅರಸರೋ ಎಂದು ಭ್ರಾಂತಿಯುಂಟಾಗುತ್ತಿತ್ತು.

ಮಹಡಿಯ ಮೇಲೆ ಸುಸ್ವರೂಪಿಯರಾದ ಶಿಷ್ಯೆಯರು ಪಾದವನ್ನು ಮೃದುವಾಗಿ ಒತ್ತುತ್ತ ಇಲ್ಲವೆ ಬೀಸಣಿಕೆಯಿಂದ ಗಾಳೀ ಹಾಕುತ್ತ ಇದ್ದರು. ಶಿಷ್ಯರು ಬಂದಜನರಿಗೆ ದರ್ಶನಮಾಡಿಸುವದಕ್ಕಾಗಿ ಅತ್ತಿಂದಿತ್ತ ಲಾಳೀಹಾಕುತ್ತಿದ್ದರು. ಸಾಧುಮಹಾರಾಜರ ಆಗಮನದಿಂದ ಮಾಧವರಾಯರು ಸ್ವರ್ಗವು ಮೂರೇ ಗೇಣು ಉಳಿದಂತಾಗಿ ಆನಂದಸಾಗರದಲ್ಲಿ ತೇಲಾಡುತ್ತಿದ್ದರು.

ಇತ್ತ ಮಹಡಿಯ ಮತ್ತೊಂದು ಸಭಾಮಂಟಪದಲ್ಲಿ ಗೋಪಾಳರಾಯನೂ ಅವನ ಪರಮಮಿತ್ರರೂ ದೊಡ್ಡ ಧ್ವನಿಯಿಂದ ನಗುತ್ತ ಕೆಲೆಯುತ್ತ ಅತ್ಯಾನಂದವನ್ನು ಸವಿಯುತ್ತಿದ್ದರು. ಫರಾಳದ ತಾಟುಗಳೂ ಚಹಾತುಂಬಿದ ಕೆಟ್ಲುಗಳೂ ಒಂದೇಸವನೆ ಬಂದೇ ಬರುತ್ತಿದ್ದವು. ಆ ಮೇಲೆ ತಾಂಬೂಲ ಸೇವನೆ ಎಲ್ಲರ ಕೈಯಲ್ಲಿ ಒಂದೊಂದು ಸಿಗಾರೇಟಿನ ಪ್ಯಾಕೆಟ್ಟು. ಸಿಗಾರೇಟಿನ ಹೊಗೆಯನ್ನು ಬಿಡುತ್ತ ಒಬ್ಬ ಗೃಹಸ್ಥನು– "ಇನ್ನೇನು, ಗೋಪಾಲನ ಮದುವೆಯಾದ ಮೇಲೆ ನಿಮಗೆ ಗೋಪಾಲನ ಸಹವಾಸವು ದುರ್ಲಭವಾದೀತು. ಅಲ್ಲವೇ ಗೋಪಾಳರಾವ?" ಎಂದು ಮಾತಿನ ಗಾಡಿಗೆ ಚಲನೆಯನ್ನು ಕೊಟ್ಟನು.

ಗೋಪಾಳ– "ಛೇ, ಛೇ, ಹಾಗೇನೂ ತಿಳಿಯಬೇಡಿರಿ. ನಾನು ಮದುವೆಯಾದ ಮೇಲೆ ಸಹ ಈಗಿನಂತೆ ನನ್ನ ಮನೆಯು ಎಲ್ಲ ಮಿತ್ರಮಂಡಳಿಗೆ ಮುಕ್ತದ್ವಾರವಾಗಿ ಉಳಿಯುವದು."

ಮತ್ತೊಬ್ಬನು– "ಇದೆಲ್ಲ ಉಪಚಾರದ ಮಾತು ಕಂಡೆಯಾ? ಮದುವೆಯಾದ ಮೇಲೆ ನೀನೇನು ಸ್ವತಂತ್ರನೇ? ರಾಣೀಸಾಹೇಬರು ಏಳು ಅಂದರೆ ಏಳು, ಕೂಡ್ರು ಅಂದರೆ ಕೂಡ್ರು"

ಗೋಪಾಳ– "ರಾಣೀಸಾಹೇಬ! ಗೀಣೀಸಾಹೇಬ! ನಾನೇನೂ ಕೇಳುವವನಲ್ಲ. ರಾಣೀಸಾಹೇಬರ ಅಧಿಕಾರ ಹಿತ್ತಲುಮನೆಯಲ್ಲಿ. ನಾನು ಹೇಳಿದಂತೆ ಕೇಳಿಕೊಂಡು ಬಿದ್ದಿರಬೇಕು."

ಇನ್ನೊಬ್ಬನು– " ಶಹಾಬಾಸ್, ಗೋಪಾಳಾ. ಮಾತಿಗೇನೂ ಕಡಿಮೆ ಇಲ್ಲ. ಮುಂದೆ ಸ್ತ್ರೀರಾಜ್ಯದಲ್ಲಿ ಸಿಲುಕಿದ ಮೇಲೆ— "

ಮತ್ತೊಬ್ಬನು– " ಮುಂದಿನಮಾತು ಮುಂದೆ. ಈಗೇನು ನಿಮ್ಮೆಲ್ಲರಿಗೂ ವಚನಪತ್ರವನ್ನು ಬರೆದು ಕೊಡಬೇಕೋ ? "

ಗೋಪಾಲನು– " ಛೇ, ಎಷ್ಟು ನಿಮ್ಮ ಅವಿಶ್ವಾಸ ! ನನ್ನ ವಚನವೆಂದಮೇಲೆ ತೀರಿತು. ಹೆಂಗಸರ ಸ್ವಭಾವ ನನಗೇನೂ ಗೊತ್ತಿಲ್ಲವೇ ? ನಾನೇನು ಹುಡುಗನೇ ? ಹೆಂಗಸಿಗೆ ಸ್ವಲ್ಪ ಸ್ವಾತಂತ್ರ್ಯಕೊಟ್ಟರೆ ತೀರಿತು, ಗಂಡನನ್ನು ಅಂಗೈಯಲ್ಲಿ ಕುಣಿಸುತ್ತಾರೆಂಬುದು ನನಗೆ ಅರಿಯದ ಮಾತೇ; ಉಪಕರಣಗಳನ್ನು ತಿಕ್ಕುವ ಅಧಿಕಾರ ಅವರದು. ನಾವು ಹೇಳಿದ ಅಡಿಗೆಯನ್ನು ಮಾಡಿಕೊಡುವ ಅಧಿಕಾರ ಅವರದು, ಸಾರಾಂಶ ನಾವು ಹೇಳಿದ ಹಾಗೆ ಕೇಳಿಕೊಂಡಿರುವ ಸರ್ವಾಧಿಕಾರವೇ ಅವರದು ಇಷ್ಟು ಸಾಲದೆ ಅವರಿಗೆ ಅಧಿಕಾರ ? "

ಮತ್ತೊಬ್ಬನು– " ಭಲೆ ! ಭಲೆ ! ವಾಹವಾ, ಏನು ಗಂಡುಗಲಿಯೋ ನೀನು ! ಹೆಂಗಸರನ್ನಾಳುವ ವಿದ್ಯೆಯಲ್ಲಿ ನೀನು ಮಹಾಪಂಡಿತನೆನ್ನಲಿಕ್ಕೆ ಏನೂ ಅಡ್ಡಿಯಿಲ್ಲ "

ಇನ್ನೊಬ್ಬನು– " ಅದಿರಲಿ ಬಿಡು. ಗೋಪಾಳಾ, ನಿನ್ನ ಹೆಂಡತಿಯನ್ನು ನೀನು ಚೆನ್ನಾಗಿ ನೋಡಿಕೊಂಡಿರುವಿಯೂ? ಅವಳಿಗೆ ವಯಸ್ಸಾದರೂ ಎಷ್ಟು ?

ಗೋಪಾಳ– " ನೋಡದೆ ಏನು ? ಚಲೋ ಹದಿನೇಳು ಹದಿನೆಂಟು ವರ್ಷದವಳಿದ್ದಾಳೆ "

ಮತ್ತೊಬ್ಬನು– " ಅದು ಹೇಗೋ ! ಇಂಥ ಪ್ರೌಢ ಕನ್ಯೆಯನ್ನು ಸೊಸೆಯನ್ನಾಗಿ ಮಾಡಿಕೊಳ್ಳಲಿಕ್ಕೆ ನಿಮ್ಮ ಕರ್ಮಠ ಮಾಧವರಾಯರು ಹೇಗೆ ಸಮ್ಮತಿಸಿದರೋ ? "

ಗೋಪಾಳ– " ಅದರ ವಿಚಾರ ನಿನಗೆ ಗೊತ್ತಿಲ್ಲವೇ ? ಹತ್ತು– ಹನ್ನೆರಡು ವರ್ಷದ ಹುಡುಗಿಯನ್ನು ಮದುವೆಯಾಗೆಂದು ಅವರ ಹಟ. ನಾಲ್ಕೈದು ವರ್ಷ ನಮಗೂ ಅವರಿಗೂ ಮಹಾಯುದ್ಧವು ನಡೆಯಿತು. ಕಡೆಗೆ ಈ ಬಹಾದ್ದುರನೇ ಗೆದ್ದನು " ಎಂದು ಬಹಳ ಆಢ್ಯತೆಯಿಂದ ಹೇಳಿದನು.

ಮುತ್ತೊಬ್ಬನು– "ಪ್ರೌಢಕನ್ನೆಯಂತೂ ಆಯಿತು ಬಿಡು. ಆದರೆ ಆಕೆ ಏನಾದರೂ ಸಾಲೆಗೆ ಹೋಗಿ ಕಲಿತಿದ್ದಾಳೋ ?"

ಗೋಪಾಲನು– "ವಿದ್ಯೆಯ ಗಂಧವೇ ಅವಳಿಗೆ ಇಲ್ಲ. ಅಂಥವಳನ್ನೇ ನೋಡಿ ಆರಿಸಿದ್ದೇನೆ. ನನಗೆಲ್ಲಾ ಗೊತ್ತು. ವಿದ್ಯೆ ಏತಕ್ಕೆ ಬೇಕು ಹೆಂಗಸಿಗೆ ? ಹೆಂಗಸಿಗೆ ವಿದ್ಯೆ ಕಲಿಸುವದೆಂದರೆ ನಮ್ಮ ಕಾಲಮೇಲೆ ನಾವೇ ಕಲ್ಲು ಹಾಕಿಕೊಂಡಹಾಗೆ "

ಇನ್ನೊಬ್ಬನು– "ಛೇ, ಬಿಡು ನಿನ್ನ ಸಂಗಡ ಮಾತಾಡುವದೇ ಕಠಿಣ. ವಿದ್ಯೆಕಲಿತ ಹುಡುಗಿಯಿದ್ದರೆ ಏನು ಕೆಟ್ಟಿ ? ಬಲು ಸೊಗಸಲ್ಲವೇ ? ಆ ಓದು ಆ ಒಯ್ಯಾರ ಆ ಡೌಲು– ಇವೆಲ್ಲಾ ಇದ್ದರೇ ವಿವಾಹಜೀವನದ ಸೌಖ್ಯ. ಇಲ್ಲದಿದ್ದರೆ ಏನು ?

ಮುತ್ತೊಬ್ಬನು– "ನಿನ್ನ ಅಭಿಪ್ರಾಯ ನನಗೆ ಸರಿಬೀಳುವದಿಲ್ಲವಪ್ಪಾ. ಸುಶಿಕ್ಷಿತ ಸ್ತ್ರೀಯರ ಬಡಿವಾರವೆನ್ನೆಷ್ಟೆಂತ ಹೇಳಲಿ ? ಅವರಿಗೆ ಗಂಡನರ ಕೂಡ ಕೂತುಕೊಂಡು ಓದಲಿಕ್ಕೆ ವರ್ತಮಾನ ಪತ್ರಗಳು ಬೇಕು; ಕಾದಂಬರಿಗಳು ಬೇಕು; ಮೇಲಿಂದ ಮೇಲೆ ನಾಟಕ ಗೃಹಕ್ಕೂ ಚಿತ್ರಪಟಗಳನ್ನು ನೋಡಲಿಕ್ಕೂ ಹೋಗಲಿಕ್ಕೆ ಬೇಕು. ಮನೆಯಲ್ಲಿಯ ಅಡಿಗೆ ಕೆಲಸಬೊಗಸೆಗಳನ್ನು ಮಾಡುವದು ಹೀನತನವೆಂದು ಅವರು ತಿಳಿಯುವರು. ಆ ಮೇಲೆ ಗಂಡನೇ ಅಡಿಗೆ ಮಾಡಬೇಕು; ಕೆಲಸ ಮಾಡಬೇಕು; ಹೆಂಡತಿಯ ದಾಸಾನು ದಾಸನಾಗಬೇಕು. ಸುಶಿಕ್ಷಿತ ಸ್ತ್ರೀಯನ್ನು ಮದುವೆಯಾಗುವದೂ ಒಂದು ಬಳೀ ಆನೆಯನ್ನು ಕಟ್ಟುವದೂ ಎರಡೂ ಒಂದೇ. ಮನೆಮುರುಕ ವ್ಯಾಪಾರ !"

ಈ ವಿಚಾರಸರಣಿಯು ಗೋಪಾಲನಿಗೆ ಬಹಳೇ ಮನಸ್ಸಿಗೆ ಬಂದು ಅವನು ತನ್ನ ಗೆಳೆಯನ ಬೆನ್ನು ಚನ್ನಾಗಿ ಚಪ್ಪರಿಸಿದನು.

ಅಷ್ಟರಲ್ಲಿ ಒಬ್ಬ ರಸಿಕನು– "ಏನು ಗೋಪಾಲಾ, ಮಾಮಲೇದಾರರ ಮಗನ ಮದುವೆಯಂದರೇನು ? ಒಂದು 'ಫಸ್ಟ್‌ಕ್ಲಾಸ' ನಾಚು ಬೇಡವೇ !" ಎಂದು ಹೊಸ ವಿಷಯ ತೆಗೆದನು.

ಅಷ್ಟರಲ್ಲಿ ಮುತ್ತೊಬ್ಬನು– "ಒಳ್ಳೇ ವಿಚಾರವಿದು. ಆದರೆ ನಾಚು ಆಗುವದಾದರೆ ಸುಂದರಾಸಾನಿಯ ಮಗಳಾದ ಗುಲಾಬಿಯ ನಾಚೇ ಆಗ

ಲಿಕ್ಕೆ ಬೇಕು. ಇಲ್ಲದಿದ್ದರೆ ನಮಗೇನೂ ಅಂಥಿಂಥಾ ನಾಟಕ ಬೇಕಾಗಿಲ್ಲ" ಎಂದು ಗೋಪಾಲನ ಮೋರೆ ನೋಡುತ್ತ ದರ್ಪದಿಂದ ನುಡಿದನು.

ಗೋಪಾಲನು— ನೀವೆಲ್ಲಾ ಒಳ್ಳೇ ಆಲೋಚನೆಯನ್ನು ಹುಡುಕಿ ತೆಗೆದಿರಿ. ನನ್ನದೂ ಅದಕ್ಕೆ ಪೂರ್ಣ ಸಮ್ಮತಿಯಿದೆ. ಆದರೆ ಈ ವಿಷಯವನ್ನು ಮೊದಲು ನಮ್ಮ ಅಪ್ಪನಿಗೆ ತಿಳಿಸಲಿಕ್ಕೆ ಬೇಕು."

ಇನ್ನೊಬ್ಬನು— " ಅಪ್ಪನಿಗೆ ಒಲ್ಲ ವಿಧೇಯನಾಗಿ ನಡೆಯುವವನೋ ನೀನು. ನಿನ್ನ ಮನಸ್ಸಿನಲ್ಲಿ ಇಲ್ಲವೆಂದು, ಅಪ್ಪನ ಮೇಲೆ ಹಾಕುತ್ತೀ ಅಷ್ಟೆ."

ಗೋಪಾಲನು— " ಛೇ, ಹಾಗಲ್ಲ. ಅಪ್ಪನು ಬೇಡೆಂದರೂ ನಾನು ನಾಟಕ ಮಾಡಿಸಿಯೇ ಬಿಡಬಹುದು. ಆದರೆ ಸಾಧುಮಹಾರಾಜರು ಬಂದಿದ್ದಾರಲ್ಲ. ಅವರ ಮನಸ್ಸಿಗೆ ಬರಲಿಕ್ಕಿಲ್ಲೆಂದು ಅಪ್ಪನನ್ನು ಕೇಳಬೇಕಾಗಿದೆ."

ಮತ್ತೊಬ್ಬನು— " ಸಾಕು ಬಿಡೋ. ನಿನ್ನ ಸಾಧುಮಹಾರಾಜರ ದೊಡ್ಡಸ್ತಿಕೆಯ ಬಗ್ಗೆ ಜಂಬಬಡಿಯಬೇಡ. ಅವರ ವೇಷವೇನು! ಡೌಲೇನು! ತಿನ್ನಲಿಕ್ಕೆ ನವನವಿಯಾದ ತಿನಿಸುಗಳೇನು! ಸದಾ ಚೆಲುವೆಯರಾದ ತರುಣಿಯರ ಮಧ್ಯದಲ್ಲಿ ಇರುವದೇನು! ಅವರೇಕೆ ನಾಟಕ ನೋಡಲಿಕ್ಕೆ ಒಲ್ಲೆಂದಾರು? ನಿಮಗೆಲ್ಲೋ ಹುಚ್ಚು!" ಎಂದು ಚೇಷ್ಟೆ ಮಾಡಿದನು.

ಗೋಪಾಲನು— " ನೀವು ಹೇಳುವದೇನೋ ನಿಜ. ಆದರೂ ಅಪ್ಪನ ಕಿವಿಯ ಮೇಲೆ ಈ ಮಾತು ಇಟ್ಟು ಆ ಮೇಲೆ ಇದರ ಯೋಜನೆ ಮಾಡಬಹುದು. ನಾನು ನಾಳೆಯೇ ಕೇಳಿ ಎಲ್ಲ ವ್ಯವಸ್ಥೆ ಮಾಡಿಸುತ್ತೇನೆ. ನೀವು ಚಿಂತೆ ಬಿಡಿರಿ" ಎಂದು ಆಶ್ವಾಸನ ಕೊಟ್ಟನು.

ಅಷ್ಟರಲ್ಲಿಯೇ ಸೀಮಾಂತ ಪೂಜನಕ್ಕೆ ಕರೆಯು ಬಂತು. ಒಂದು ಮೋಟರ್‌ಕಾರು ಪೂಮಾಲೆಗಳಿಂದ ಸುಶೋಭಿತವಾಗಿ ಮನೆಯ ಮುಂದೆ ನಿಂತಿತ್ತು. ಆದರಲ್ಲಿ ನಡುವೆ ಸಾಧುಮಹಾರಾಜರು, ಬಲಕಡೆಗೆ ಮದುಮಗನೂ, ಎಡಗಡೆಗೆ ಮಹಾರಾಜರ ಒಬ್ಬ ಸುಸ್ವರೂಪ ಶಿಷ್ಯೆಯೂ ಕೂತುಕೊಂಡರು. ಹಿಂದೆ ಒಬ್ಬ ಶಿಷ್ಯನು ಮಹಾರಾಜರಿಗೆ ಚೌರವನ್ನು ಬೀಸುತ್ತ ನಿಂತುಕೊಂಡಿದ್ದನು. ನೋಡುವವರಿಗೆ ಮಹಾರಾಜರೇ ಮದುಮಕ್ಕಳೆಂದು ಭಾಸವಾಗುವಂತೆ ಇತ್ತು.

ಸೀಮಾಂತ ಪೂಜನವಾಯಿತು. ಮುಂದೆ ಮರುದಿವಸ ಕನ್ಯಾದಾನ, ಪಾಣಿಗ್ರಹಣ, ಲಾಜಾಹೋಮ, ಗೃಹಪ್ರವೇಶ, ಮೊದಲಾದ ಎಲ್ಲ ವಿಧಾನಗಳೂ ಪೂರ್ವಪದ್ಧತಿಯಂತೆ ಸಾಂಗವಾದವು. ಮಂತ್ರಪಠನಗಳು ವಾಡಿಕೆಯಂತೆ ಪಂಜಾಬ ಮೇಲಗಾಡಿಯ ವೇಗದಿಂದ ಸಾಗಿದ್ದುವು. ದಕ್ಷಿಣೆಯ ವೇಳೆಯೂ ಒಂದಾಗ ಸ್ಟೇಶನು ಬಂದು ಗಾಡಿಯೂ ನಿಲ್ಲುತ್ತಿತ್ತು. ವಿವಾಹ ಮಂತ್ರಗಳ ಗಂಭೀರವಾದ ಅರ್ಥ, ಅವುಗಳಲ್ಲಿ ಹೇಳಿದ ವಧೂವರರ ಧರ್ಮಗಳು,– ಇವುಗಳ ಕಡೆಗೆ ವಧೂವರರ ಲಕ್ಷ್ಯವೂ ಇದ್ದಿಲ್ಲ; ವಿಧಾನ ಮಾಡಿಸುವ ವೈದಿಕರ ಲಕ್ಷ್ಯವೂ ಇದ್ದಿಲ್ಲ. ವಧೂವರರಿಗೊಂದು ಆನಂದ ಪ್ರಸಂಗ. ಅವರ ಲಕ್ಷ್ಯವು ವಸ್ತ್ರಾಲಂಕಾರ ಮೊದಲಾದ ಬಾಹ್ಯಾಡಂಬರದ ಕಡೆಗೆ. ವೈದಿಕರು ಹೇಳಿದಂತೆ, ಕೆಲವು ವಿಧಾನಗಳನ್ನು, ಪ್ರಶ್ನೆ ಮಾಡದೆ ಅರ್ಥವರಿಯದೆ, ಮಾಡುವದಷ್ಟೇ ಅವರ ಕೆಲಸ. ವೈದಿಕರ ಲಕ್ಷ್ಯವು ದಕ್ಷಿಣೆಯ ಕಡೆಗೆ; ತಮಗೆ ಒದಗತಕ್ಕ ಬಾಬುಗಳ ಕಡೆಗೆ. ಈ ಪ್ರಕಾರ ಜೀವನದೊಳಗಿನ ಅತ್ಯಂತ ಮಹತ್ವದ ವಿವಾಹ ಸಂಸ್ಕಾರವು ಮಂತ್ರಗಳ ಗಜಬಜೆಯಲ್ಲಿ, ಸ್ತ್ರೀಪುರುಷರ ವಸ್ತ್ರಾಲಂಕಾರಗಳ ಮೆರೆದಾಟದಲ್ಲಿ, ವೈದಿಕರ ಬಾಬುಗಳ ಆರೆದಾಟದಲ್ಲಿ, ಪಕ್ವಾನ್ನಗಳ ಘಮಘಮಾಟದಲ್ಲಿ–ಯಾರ ಮೇಲೆಯೂ ಯಾವ ಹಿತಕರವಾದ ಸಂಸ್ಕಾರವನ್ನೂ ಮಾಡದೆ ಮುಗಿದು ಹೋಯಿತು.

ಗಂಡಿನವರ ಪ್ರಸ್ತದ ದಿವಸ ಊಟವಾದ ಕೂಡಲೆ ಗೋಪಾಳನು ಮಾಧವರಾಯರನ್ನು ಏಕಾಂತದಲ್ಲಿ ಕಂಡನು. ಗೋಪಾಳನನ್ನು ಏಕಾಂತದಲ್ಲಿ ಕಂಡಕೂಡಲೆ ಮಾಧವರಾಯರಿಗೆ ತುಂಬಾ ಹೆದರಿಕೆ. ಯಾಕಂದರೆ ಗೋಪಾಳನು ಒಂದು ಮಾತು ಆಡಿದ ಮೇಲೆ ಬ್ರಹ್ಮದೇವರು ಬಂದರೂ ತಿರುಗಿ ತಕ್ಕೊಳ್ಳುವನಲ್ಲ. ಅವನು ಬಂದವನೇ–"ಕಾಕಾ, ಈ ಹೊತ್ತು ರಾತ್ರಿ ನಾಚಿನ ವ್ಯವಸ್ಥೆ ಮಾಡಿದ್ದೇನೆ. ಸರಿಯಾಗಿ ಒಂಬತ್ತು ಘಂಟೆಗೆ," ಎಂದು ಲಗುಬಗೆಯಿಂದ ನುಡಿದನು.

ಮಾಧವರಾಯರು ದಂಗು ಬಡಿದವರಾಗಿ–"ಎಲ್ಲಿಯ ನಾಚು ? ಏನು ಕಥೆ ? ಗೋಪಾಳಾ, ನನ್ನನ್ನು ಕೇಳದೆ ಏಕೆ ವ್ಯವಸ್ಥೆ ಮಾಡಿದಿ ?" ಎಂದು ಅಂಜಂಜುತ್ತ ಕೇಳಿದರು.

"ನಿಮ್ಮನ್ನು ಕೇಳಲಿಕ್ಕೆ ನನಗೆ ಅವಕಾಶವೇ ದೊರೆಯಲಿಲ್ಲ. ನನ್ನ

ಸ್ನೇಹಿತರ ಆಗ್ರಹವೂ ಒಹಳಾಯಿತು. ಆದ್ದರಿಂದ ನಾನು ಮಾತು ಕೊಟ್ಟೆ. ನೂರೇ ರೂಪಾಯಿ. ಹೆಚ್ಚಿಗೇನೂ ಇಲ್ಲ."

ಈ ಉಡಾಳ ಮಗನ ಎದೆಗಾರಿಕೆಯನ್ನು ನೋಡಿ ಮಾಧುರಾಯನು ವಿಶೇಷ ವಿರೋಧ ಮಾಡುವದನ್ನು ಬಿಟ್ಟು—

"ಅಬ್ಬಬ್ಬಾ! ಏನು? ಕಡಿಮೆಯಾಯಿತೇ! ನಿನಗೆ ದುಡ್ಡಿನ ಬೆಲೆಯೇ ಗೊತ್ತಿಲ್ಲ. ಒಳ್ಳೇದು. ಯಾರ ನಾಚು? ಮನೆಯಲ್ಲಿ ಸಾಧು ಮಹಾರಾಜರು ಬಂದಿದ್ದಾರ. ಅವರಿಗೆ ಏನು ಅನಿಸುತ್ತದೋ ಏನೋ!" ಎಂದು ಅರ್ಧ ಸಮ್ಮತಿಯನ್ನು ಕೊಡುತ್ತ ನುಡಿದರು.

"ಸುಂದರಾಬಾಯಿಯ ಮಗಳಾದ ಗುಲಾಬಿಯ ನಾಚು. ಸರ್ವೋತ್ಕೃಷ್ಟ ಕುಣಿತ. ನೀವು ನೋಡಿದರೆ ನಿಮಗೆ ಆನಂದದ ಲಹರಿಗಳು ಬರುವವು"

ಗಾಬರಿಯಾಗಿ "ಸುಂ....ದ....ರಾ....ಬಾಯಿ ಯಾರು?" ಎಂದು ಅನುಮಾನಿಸುತ್ತ ಕೇಳಿದರು.

"ಸುಂದರಾಬಾಯಿ ಗೊತ್ತಿಲ್ಲವೇ, ನಿಮ್ಮ ಹಳೇ ಪರಿಚಯದ ಸುಂದರಾಬಾಯಿ. ಅವಳ ಮಗಳು ಗುಲಾಬಿ."

ಈ ಮಾತು ಮಾಧವರಾಯರ ಎದೆಯಲ್ಲಿ ಬಾಣ ನಟ್ಟಂತೆ ನಟ್ಟಿತು. ಅದಕ್ಕೆ ಸ್ವಲ್ಪ ಇತಿಹಾಸವಿದ್ದಿತು.

ಸುಂದರಾಬಾಯಿಯು ಮಾಧವರಾಯರ ಹಳೇ ಪರಿಚಯದವಳೆಂದು ಹಿಂದೆಯೇ ಹೇಳಿದೆ. ಸುಂದರಾಬಾಯಿಯು ವೇಶ್ಯೆಯರ ಕುಲದವಳಲ್ಲ. ಮೊದಲು ಕುಲೀನ ಸ್ತ್ರೀಯಳು. ಮಾಧವರಾಯರು ಮಾಮಲೇದಾರರಾಗಿದ್ದಾಗ ಅವರ ಕೈಕೆಳಗೆ ಕೆಲಸ ಮಾಡುತ್ತಿದ್ದ ಒಬ್ಬ ಕಾರಕೂನ ಹೆಂಡತಿಯು. ಗಂಗಾಬಾಯಿಯು ಸನ್ಮರ್ದೆಯನ್ನು ಹಡೆಯುವ ಕಾಲಕ್ಕೆ ಮಾಮಲೇದಾರರ ವಿನಂತಿ-ಅಲ್ಲ- ಅಪ್ಪಣೆಯ ಮೂಲಕ ಆ ಕಾರಕೂನನು ತನ್ನ ಹೆಂಡತಿಯನ್ನು ಮಾಮಲೇದಾರರ ಮನೆಗೆ ಕೆಲಸ ಮಾಡಲಿಕ್ಕೆ ಕಳಿಸಿದನು. ಆಗ ಸುಂದರಾಬಾಯಿಯ ವಯಸ್ಸು ಇಪ್ಪತ್ತು ವರ್ಷ. ನೋಡಲಿಕ್ಕೆ ಸ್ವಲ್ಪ ರೂಪವತಿ. ಮಾಮಲೇದಾರರ ಮನಸ್ಸು ಅವಳ ಮೇಲೆ ಹೋಯಿತು. ಮುಂದೆ ಸುಂದರಾಬಾಯಿಯು ಬಸುರಾದಳು. ಗಂಗಾಬಾಯಿಯವರ ಬಾಣಂತಿತನ ಮುಗಿದ ಕೂಡಲೆ ಸುಂದರಾಬಾಯಿ ತಿರುಗಿ ಗಂಡನ ಮನೆಗೆ ಹೋದಳು,

ಮುಂದೆ ಒಂದು ಹೆಣ್ಣು ಕೂಸನ್ನು ಹೆತ್ತಳು. ಗಂಡನಿಗೇನೂ ಸಂಶಯ ಬರಲಿಲ್ಲ. ಆದರೆ ಮುಂದೆ ಆ ಕೂಸು ದೊಡ್ಡದಾಗುತ್ತಲೇ ಮಾಧವರಾಯರ ಮಗಳು ನರ್ಮದೆಯನ್ನೇ ಹೋಲಹತ್ತಿತು. ಆಗ ಮಾತ್ರ ಆ ಕಾರಕೂನನು ಹೆಂಡತಿಯ ಮೇಲೆ ಸಂಶಯಗೊಂಡು ಅವಳನ್ನು ಮನೆ ಬಿಟ್ಟು ಹೊರಗೆ ಹಾಕಿದನು. ಆಕೆ ತನ್ನ ಚಿಕ್ಕಮಗಳನ್ನು ಕರೆದುಕೊಂಡು ಮಾಧವರಾಯರ ಆಶ್ರಯದಲ್ಲಿಯೇ ತನ್ನ ಆಯುಷ್ಯಗಳೆಯಬೇಕೆಂದು ಬಂದಳು. ಧರ್ಮಿಷ್ಠರಾದ ಮಾಧವರಾಯರು ಇಂಥವಳಿಗೆ ಆಶ್ರಯ ಕೊಡುವರೇ? ಅವಳಿಗೆ ಏನೂ ದಯ ತೋರಿಸದೆ ಹೊರಗೆ ನೂಕಿಬಿಟ್ಟರು. ಮುಂದೆ ಅವಳಿಗೆ ಅನ್ನಕ್ಕೆ ಗತಿ ಇಲ್ಲದಂತಾಗಿ ನಿರ್ವಾಹವಿಲ್ಲದೆ ವೇಶ್ಯಾವೃತ್ತಿಯನ್ನು ಕೈಕೊಳ್ಳಬೇಕಾಯಿತು. ತನ್ನನ್ನು ಜಾತಿಯಿಂದಲೂ ಕುಲದಿಂದಲೂ ಭ್ರಷ್ಟ ಮಾಡಿದಂಥ ಮಾಧವರಾಯರ ಮೇಲೆ ಅಂದಿನಿಂದ ಆಕೆಗೆ ದ್ವೇಷ. ಮುಂದೆ ತನ್ನ ಮಗಳಾದ ಸುಶೀಲೆಯು ಮದುವೆಯ ವಯಸ್ಸಿಗೆ ಬರಲು ಅವಳಿಗೆ ಚಲೋ ವರನನ್ನು ನೋಡಿ ವರದಕ್ಷಿಣೆ ಕೊಟ್ಟು ಮದುವೆ ಮಾಡಬೇಕೆಂದು ಪುನಃ ಮಾಧವರಾಯರಿಗೆ ಸೆರಗೊಡ್ಡಿ ಬೇಡಿಕೊಂಡಳು. ಆಗ ಸಹ ಮಾಧವರಾಯರ ಹೃದಯವು ಕರಗಲಿಲ್ಲ. ಎರಡನೇ ಮಾರ್ಗ ಕಾಣದೆ ಮಗಳಿಗೂ ವೇಶ್ಯಾ ವೃತ್ತಿಯನ್ನೇ ಕಲಿಸಿಕೊಟ್ಟಳು. ಆಕೆಗೆ ಗಾಯನ, ಕುಣಿತ ಮುಂತಾದ್ದನ್ನು ಕಲಿಸಿದಳು. ಅವಳೇ— ಗುಲಾಬಿ. ಇಷ್ಟು ದಿವಸ ಮಾಧವರಾಯರ ಮೇಲೆ ಸೇಡು ತೀರಿಸಿಕೊಳ್ಳುವ ಹಾದೀ ನೋಡುತ್ತಿದ್ದಳು ಆ ಸುಂದರಾಬಾಯಿ. ಗೋಪಾಳನಿಗೂ ಗುಲಾಬಿಗೂ ಸ್ನೇಹ ಮಾಡಿಕೊಟ್ಟಳು. ಗೋಪಾಳನ ಲಗ್ನವು ಬರಲು ಗುಲಾಬಿಯ ನಾಚನ್ನು ನಿನ್ನ ಲಗ್ನದಲ್ಲಿ ಮಾಡಿಸಬೇಕೆಂದು ಅವನಿಗೆ ಆಗ್ರಹ ಮಾಡಿದಳು. ಈ ಪ್ರಕಾರ ಯಾವ ದುಡ್ಡನ್ನು ತಮ್ಮ ಪಾಪದಿಂದ ಹುಟ್ಟಿದ ಮಗಳಿಗೆ ಮಾಧವರಾಯರು ಕೊಡಲಿಲ್ಲವೋ ಅದೇ ದುಡ್ಡನ್ನು ಆ ಮಗಳ ಕೈಯಿಂದ ಸೆಳೆಯಿಸಿಕೊಳ್ಳುವದೇ ಅವಳ ಭೀಕರವಾದ ಪ್ರತಿಜ್ಞೆಯು. ತಮ್ಮ ಹೊಟ್ಟೆಯ ಮಗಳು—ನರ್ಮದೆಯ ತಂಗಿ—ಜನರ ಮುಂದೆ ನಾಚು ಮಾಡಿದ್ದನ್ನು ನೋಡಿದಮೇಲಾದರೂ ಅವರ ಹೃದಯಕ್ಕೆ ಪೆಟ್ಟು ತಾಗೀತೆಂದು ಅವಳ ಬಹುದಿವಸದ ಬಯಕೆ.

ಗುಲಾಬಿಯ ನಾಚನ್ನು ತಪ್ಪಿಸುವದಕ್ಕಾಗಿ ಮಾಧವರಾಯರು ವಿಶ್ವ

ಪ್ರಯತ್ನ ಮಾಡಿದರು. ಸುಂದರಾಬಾಯಿಯ ಮನೆಗೆ ಹೋಗಿ ಅವಳಿಗೆ ನೆರೆ ಗೂಡ್ಡಿ ಬೇಡಿಕೊಂಡರು. ದುಡ್ಡಿನ ಆಶೆ ತೋರಿಸಿದರು. ಸುಂದರಾಬಾಯಿಯು ' ನೀವು ನನ್ನ ಆಯುಷ್ಯವನ್ನು ಹಾಳುಗೆಡವಿದಕ್ಕೆ ಇದು ನಿಮಗೆ ದೇವರಿಂದ ಪ್ರಾಯಶ್ಚಿತ್ತವು " ಎಂದು ಹೇಳಿ ಅವರನ್ನು ಕಳುಹಿಸಿಬಿಟ್ಟಳು.

ಗೊತ್ತು ಮಾಡಿದ ಪ್ರಕಾರ ನಾಚು ನಡೆಯಿತು. ಗೋಪಾಳನೂ ಅವನ ಸ್ನೇಹಿತರೂ ಗುಲಾಬಿಯ ನಾಚನ್ನು ನೋಡಿ ತಮ್ಮ ಜನ್ಮವು ಇಂದು ಸಾರ್ಥಕವಾಯಿತೆಂದು ಆನಂದಸಾಗರದಲ್ಲಿ ಈಸಾಡಿದರು. ಸಾಧುಮಹಾರಾಜರೂ ನಾಚನ್ನು ನೋಡಲಿಕ್ಕೆ ತಮ್ಮ ಶಿಷ್ಯಮಂಡಲಿಯೊಡನೆ ಬಂದದ್ದು ಆಶ್ಚರ್ಯದ ಸಂಗತಿ ಅವರ ದರ್ಶನದಿಂದ ಗುಲಾಬಿಯು ಕೃತಾರ್ಥಳಾದಳೋ ಅಥವಾ ಗುಲಾಬಿಯ ದರ್ಶನದಿಂದ ಸಾಧುಮಹಾರಾಜರು ಕೃತಾರ್ಥರಾದರೋ ಎಂಬುದನ್ನು ಹೇಳುವದಕ್ಕೆ ನಮ್ಮ ಬುದ್ಧಿಯಂತೂ ಸಾಲದು.

ಮಾಧವರಾಯರು ಒಂದು ಮೂಲೆಯಲ್ಲಿ ಕುಳಿತುಕೊಂಡಿದ್ದರು. ತಮ್ಮ ಪಾಪದ ಮೂರ್ತಿಯು ಕುಣಿಯುವದನ್ನು ಒಂದರಕ್ಷಣ ನೋಡಿದರು. ಮುಂದೆ ಅವರಿಂದ ನೋಡುವದಾಗಲಿಲ್ಲವೆಂದು ಕಾಣುತ್ತದೆ. ಕೆಳಗೆ ಮೋರೆ ಮಾಡಿದವರು ಮೇಲಕ್ಕೆ ಎತ್ತಲೇ ಇಲ್ಲ. ಅವರ ಹೃದಯದ ಮೇಲೆ ಪಾಶ್ಚಾತ್ತಾಪದಿಂದ, ಬರೆಯನ್ನು ಕೊಟ್ಟಂತಾಯಿತು.



## ೯

# ತೀರ್ಥಯಾತ್ರೆಗೆ ಪ್ರಯಾಣವು.



ಗೋಪಾಲನ ಮದುವೆಯಾದ ಮೇಲೆ ಮಾಧವರಾಯರ ಮೈಯಲ್ಲಿ ಚೆನ್ನಾಗಿರಲಿಲ್ಲ. ಪೂರ್ವಾಶ್ರಮದ ಪಾಪಜೀವನದ ಭೀಕರಸ್ವರೂಪವು ಅವರ ಮಾನಸಿಕ ಸ್ವಾಸ್ಥ್ಯವನ್ನು ಓಡಿಸಿಬಿಟ್ಟಿತು. ಬರಬರುತ್ತ ಅವರು ಅಶಕ್ತರಾಗುತ್ತ ಹಾಸಿಗೆ ಹಿಡಿದರು. ಗೋಪಾಲನ ದುಂದುಗಾರಿಕೆಯೂ ಅವಿಧೇಯತನವೂ ಅವರಿಗೆ ದತ್ತಕ ಮಾಡಿಕೊಂಡ ಬಗ್ಗೆ ಗಲ್ಲ-ಗಲ್ಲ ಬಡಿದುಕೊಳ್ಳಲಿಕ್ಕೆ ಹಚ್ಚಿದುವು. ಕಡೆಗೆ ಅವರ ಜಡ್ಡು ಹೆಚ್ಚಾಗುತ್ತ ಹೋಗಿ ಅವರು ಒಂದು ದಿವಸ ಇಹಲೋಕದ ಯಾತ್ರೆಯನ್ನು ಮುಗಿಸಿದರು.

ಹಿರಿಯರು ತೀರಿಕೊಂಡ ಕೂಡಲೆ ಗೋಪಾಲನ ಸ್ವಚ್ಛಂದವೃತ್ತಿಯು ಮಿತಿಮೀರಿತು. ಅವನಿಗೂ ರಂಗೂಬಾಯಿಗೂ ಸ್ವಲ್ಪಾದರೂ ಕೂಡಿ ನಡೆಯಲಿಲ್ಲ. ರಂಗೂಬಾಯಿಯು ಮಾಧವರಾಯರು ಜಡ್ಡಾದಾಗ ಇವರ ಪೆಟ್ಟಿಗೆಯೊಳಗಿಂದ ಸಾವಿರಾರು ರೂಪಾಯಿ ಬೆಲೆಬಾಳುವ ಬಂಗಾರದ ಹಾಗೂ ಮುತ್ತಿನ ಒಡವೆಗಳನ್ನು ಕದ್ದಿಟ್ಟುಕೊಂಡಿದ್ದಳು. ಈ ಸುದ್ದಿಯು ಗೋಪಾಲನಿಗೆ ಹಿರಿಯರ ಮರಣಾನಂತರ ತಿಳಿಯಿತು. ಕೂಡಲೇ ಅವನು ರಂಗೂಬಾಯಿಯನ್ನು ಮನೆಯಿಂದ ಹೊರಗೆ ಹಾಕಿದನು. ರಾಮಭಟ್ಟರು ರಂಗೂಬಾಯಿಯ ಪಕ್ಷವಹಿಸಿ ಗೋಪಾಲನಿಗೆ ಸಿಟ್ಟುಮಾಡಿ ಬುದ್ಧೀ ಹೇಳಲಿಕ್ಕೆ ಹೋಗಲು ಅವರಿಗೂ ಇನ್ನು ನಮ್ಮ ಮನೆಗೆ ಕಾಲು ಹಾಕಕೂಡದೆಂದು ಕಟ್ಟಪ್ಪಣೆಯಾಯಿತು.

ರಂಗೂಬಾಯಿಯು ಯಾರ ಬಾಗಿಲಿಗೂ ಹೋಗದೆ ಸಹಜಾನಂದ ಸಾಧುಗಳ ಮಠಕ್ಕೆ ಹೋಗಿ ಅವರ ಬೆನ್ನುಬಿದ್ದಳು. ಸಾಧುಗಳು ಅವಳ

ಮೇಲೆ ಅನುಗ್ರಹ ಮಾಡಿ ಅವಳನ್ನು ತಮ್ಮ ಶಿಷ್ಯಮಾಲಿಕೆಯಲ್ಲಿ ಸೇರಿಸಿ ಕೊಂಡರು. ರಾಮಭಟ್ಟರೂ ಸಾಧುಗಳ ಭೆಟ್ಟಿಗೆ ಮೇಲಿಂದ ಮೇಲೆ ಹೋಗುತ್ತಿದ್ದರು.

ಮುಂದೆ ಕೆಲವು ದಿವಸಗಳಲ್ಲಿ ಸುಂದರಾಸಾನಿಯು ತನ್ನ ಜೀವನವನ್ನು ಸಾರ್ಥಕಗೊಳಿಸುವದಕ್ಕಾಗಿ ಕಾಶೀಯಾತ್ರೆಗೆ ಹೋದಳು. ಹೋಗುವಾಗ ಅವಳು ತನ್ನ ಮಗಳಾದ ಗುಲಾಬಿಯನ್ನು ಸಾಧುಮಹಾರಾಜರ ಮಠಕ್ಕೆ ಕರೆದುಕೊಂಡು ಹೋಗಿ "ಮಹಾರಾಜರು ಈ ಪಾಪಿಯ ಸೇವೆಯನ್ನು ಸ್ವೀಕರಿಸಿ ಅವಳ ಉದ್ಧಾರವನ್ನು ಮಾಡಬೇಕು" ಎಂದು ಪ್ರಾರ್ಥನೆ ಮಾಡಿ ಕೊಂಡು ಸಾಧುಗಳ ಚರಣಸೇವೆಗೆ ಮಗಳನ್ನು ಸಮರ್ಪಿಸಿದಳು.

ಈ ಪ್ರಕಾರ ಸಾಧುಗಳ ಶಿಷ್ಯವೃಂದವು ದಿನದಿನಕ್ಕೆ ಬೆಳೆಯುತ್ತ ಹೋಯಿತು.

* * * * *

ಕಾರ್ತೀಕಮಾಸವು. ಚಂದ್ರಪುರದಲ್ಲಿ ಸುಖಕರವಾದ ಚಳಿಯು ಬಿಟ್ಟಿತ್ತು. ರಾಮರಾಯನು ಕಾಲೇಜದ ಶಿಕ್ಷಣವನ್ನು ಮುಗಿಸಿಕೊಂಡು 'ಪಶುವೈದ್ಯ'ನೆಂಬ ಸರ್ಟಿಫಿಕೇಟನ್ನು ಪಡೆದು ತನ್ನ ಹೆಂಡತಿ ಮಗನೊಂದಿಗೆ ಚಂದ್ರಪುರಕ್ಕೆ ಬಂದಿದ್ದನು. ನಾಲ್ಕುವರ್ಷ ಅಭ್ಯಾಸ ಮಾಡಿ ಉಂಟಾದ ಮಾನಸಿಕ ದಣುವನ್ನು ಹೋಗಲಾಡಿಸುವುದಕ್ಕೆ ಒಂದುವರ್ಷದ ವರೆಗೆ ಏನೂ ಕೆಲಸ ಮಾಡದೆ ಸಂಪೂರ್ಣ ವಿಶ್ರಾಂತಿಯನ್ನು ಪಡೆಯಬೇಕೆಂದು ಅವನ ನಿಶ್ಚಯವು. ಅಪ್ಪಾಸಾಹೇಬನು ನರ್ಮದಾಬಾಯಿಯೊಂದಿಗೆ ಬೇರೊಂದು ಮನೆಮಾಡಿಕೊಂಡು ಇರುತ್ತಿದ್ದನು. ಬಳವಂತರಾಯನ ಗೋ ಶಾಲೆಯ ಕೆಲಸವೂ ಊರ ಜನರಿಗೆ ಹಾಲಿನ ಪೂರೈಕೆಯೂ ಸುಸೂತ್ರವಾಗಿ ನಡೆದಿದ್ದುವು. ಅಪ್ಪಾಸಾಹೇಬನು ಗೋಶಾಲೆಯ ಕೆಲಸದಲ್ಲಿ ಮನಸ್ಸು ಹಾಕಿ ಬಳವಂತರಾಯನಿಗೆ ಸಹಾಯಮಾಡುತ್ತ ಉಳಿದ ವೇಳೆಯನ್ನು ಜ್ಞಾನಾರ್ಜನೆಯಲ್ಲಿ ಕಳೆಯುತ್ತಿದ್ದನು. ಬಳವಂತರಾಯರ ಮನೆಯಲ್ಲಿ ನಿತ್ಯ ಸಂಜೆಯ ನಾಲ್ಕರಿಂದ ಆರು ಘಂಟೆಯವರೆಗೆ ಇವರೆಲ್ಲರೂ ಒಟ್ಟುಗೂಡಿ ಅನೇಕ ವಿಷಯಗಳ ಮೇಲೆ ಚರ್ಚೆಯನ್ನು ನಡೆಯಿಸುತ್ತಿದ್ದರು. ಬಹು

ಶ್ರುತನೂ ಸಹಚಾರಿಯೂ ಆದ ಬಳವಂತರಾಯನೇ ಈ 'ಚರ್ಚಾಮಂಡಳ'ದ ಅಧ್ಯಕ್ಷನು. ರಾಮರಾಯನು ಅನೇಕ ಸಂಶಯಗಳನ್ನು ತೆಗೆದು ಬಳವಂತರಾಯನ ಜ್ಞಾನವನ್ನು ಒರೆಗೆ ಹಚ್ಚುತ್ತಿದ್ದನು.

ಹೀಗೆ ಕೆಲವು ದಿವಸ ನಡೆಯಲು ರಾಮರಾಯನಿಗೆ ಕೂತು ಕೂತು ಬೇಸರ ಹುಟ್ಟಿತು. ಅವನ ಮನಸ್ಸಿನಲ್ಲಿ ಎಲ್ಲಿಯಾದರೂ ಪ್ರವಾಸಕ್ಕೆ ಹೋಗಬೇಕೆಂಬ ವಿಚಾರವು ತಲೆಯೆತ್ತಿತು. ಆದರೆ ಒಬ್ಬನೇ ಹೋಗುವದು ಅವನಿಗೆ ಬೇಡವಾಗಿತ್ತು. ಬಳವಂತನನ್ನೂ ಅಪ್ಪಾಸಾಹೇಬನನ್ನೂ ಹೊರಡಿಸಬೇಕೆಂದು ಅವನ ಕೋರಿಕೆಯು. ಅಪ್ಪಾಸಾಹೇಬನ ಮನಸ್ಸನ್ನು ಒಲಿಸುವದೇನೂ ಕಠಿಣವಾಗಿದ್ದಿಲ್ಲ. ಆದರೆ ಗೋಶಾಲೆಯನ್ನು ಬಿಟ್ಟು ಹೋಗಲಿಕ್ಕೆ ಬಳವಂತನು ಸಿದ್ಧನಿದ್ದಿಲ್ಲ. ರಾಮರಾಯನು ಮಾತ್ರ ದಿನಾಲು ಮುಂಜಾನೆ ಸಂಜೆ ಇದೇ ವಿಷಯವನ್ನು ಬಳವಂತನ ಮನಸ್ಸಿನ ಮೇಲೆ ಕಟಿಯುತ್ತಿದ್ದನು. ಕಡೆಗೆ ಒಂದು ದಿನ ಸಾಯಂಕಾಲ ರಾಮರಾಯನ ಮನಸ್ಸಿನ ಉಷ್ಣಮಾನವು ಏರಿತು. ಅವನು ಬಳವಂತರಾಯನಿಗೆ– "ಏನಪ್ಪಾ, ಹೊರಡೋಣ ಹೊರಡೋಣವೆಂದು ಆಶೆ ತೋರಿಸಹತ್ತಿ ಈಗ ಹದಿನೈದು ದಿನಗಳಾದವು. ನೀನೇನು ನಾಳಿಗೆ ಹೊರಡುವವನೋ ಇಲ್ಲವೋ, ಒಮ್ಮೆ ಹೇಳಿ ಬಿಡಬಾರದೆ?" ಎಂದು ಆತುರತೆಯಿಂದ ನುಡಿದನು.

ಬಳವಂತನು– "ಯಾಕಪ್ಪಾ, ಬಹಳ ಉತಾವಳಿಯಾಗಿದ್ದೀ. ಅಂಥದೇನು ಅವಸರ? ಸಾವಕಾಶ ಹೋದರೆ ಬಂದೀತು." ಎಂದು ಸಮಾಧಾನದಿಂದ ಉಸುರಿದನು.

ರಾಮೂ– "ಛೇ, ಛೇ, ನಿನಗೆ ಹೇಳುವದು ಬಹಳ ಕಷ್ಟ. ಅಭ್ಯಾಸ ಮಾಡಿ ಮಾಡಿ ತಲೆ ಕೆಟ್ಟು ಹೋಗಿದೆ ಪ್ರವಾಸಕ್ಕೆ ಹೋಗಿ ಬಂದರೇ ನನ್ನ ತಲೆಯು ತಾಳದ ಮೇಲೆ ಬಂದೀತು. ಇಲ್ಲದಿದ್ದರೆ ಹುಚ್ಚರ ಆಸ್ಪತ್ರೆಯೇ ನನಗೆ ಗತಿ." ಎಂದು ಬಹಳ ತಲೆವಾಕರಿಕೆಯಿಂದ ಅಂದನು.

ಬಳವಂತ– "ತಲೆ ಕೆಡಲಿಕ್ಕೆ ಏನಾಯಿತು? ಕಾಲೇಜಿನಲ್ಲಿ ನೀನು ಮಾಡಿದ ಅಭ್ಯಾಸ ನನಗೆ ಗೊತ್ತಿದೆ. ಟೇನಿಸ್ಸು ಆಡುವದು, ತಾಸು ತಾಸು ಹರಟೆ ಹೊಡೆಯುವದು, ಮೇಜವಾನಿಯ ಮೇಲಾಟದಲ್ಲಿ ಮೊದಲನೇ ನಂಬರು ಪಡೆಯುವದು–ಇವೇ ಹೌದಲ್ಲೋ ನಿನ್ನ ತಲೆಯನ್ನು ಕೆಡಿಸಿದುವು.

ಅಭ್ಯಾಸ ನೋಡಿದರೆ ದೊಡ್ಡದೊಂದು ಸೊನ್ನೆ !" ಎಂದು ಚೇಷ್ಟೆಯನ್ನು ಮಾಡಿದನು.

ರಾಮನು— "ಹೌದು ಹೌದು, ಅಭ್ಯಾಸ ಮಾಡದೆ ಪರೀಕ್ಷೆ ಪಾಸಾದೆ. ನಮ್ಮ ದೊಡ್ಡಪ್ಪನ ಮಕ್ಕಳೋ ಅವರು ಪರೀಕ್ಷಕರು ಉಂಡಾಡಿಗನಿಗೆ ಪಾಸು ಮಾಡಲಿಕ್ಕೆ ?"

ಬಳವಂತ— "ಪರೀಕ್ಷೆ ಪಾಸಾಗುವದೇನು ? ಅದಕ್ಕೇನೂ ಬಹಳ ಅಭ್ಯಾಸ ಬೇಕಾಗಿಲ್ಲ. ಪರೀಕ್ಷಕರಾದ ಶಿಕ್ಷಕರು ಬರೆಕೊಳ್ಳಲಿಕ್ಕೆ ಹೇಳಿದ ಟಿಪ್ಪಣೆಗಳನ್ನಷ್ಟು ಓದಿಕೊಂಡರೆ ಆಯಿತು. ಏನದೆ, ಅದರಲ್ಲಿ ಹುಣಸೇ ಹಣ್ಣು ?

ಶಾರದೆ— "ಸುಮ್ಮನೆ ಊರೂರು ತಿರುಗಾಡಿದರೆ ಏನು ಉಪಯೋಗ? ದುಡ್ಡು ಮಾತ್ರ ಹಾಳು. ಒಂದು ದನದ ಔಷಧಾಲಯವನ್ನು ತೆಗೆದು ಉದ್ಯೋಗಕ್ಕೆ ಹತ್ತಬಾರದೇನು? ಎಷ್ಟು ದಿವಸ ಸುಮ್ಮನೇ ಕಾಲ ಹಾಕುವದು ಹಿರಿಯರ ಗಳಿಕೆಯ ಮೇಲೆ?" ಎಂದು ನಡುವೆ ಬಾಯಿ ಹಾಕಿದಳು.

ರಾಮನು— "ಅಬ್ಬಬ್ಬಾ! ಏನು ನಿನ್ನ ಬುದ್ಧಿವಂತಿಕೆ? ಏನು ಬಾಯಿ? ನಿನ್ನ ಸಂಗಡ ಮಾತಾಡಿ ನಾನು ಗೆದೆಯುವೆನೇ ? ಒಳ್ಳೇದು, ನಿಮ್ಮ ಮುಂದೆ ಈ ಮಾತು ಎತ್ತಿದ್ದೇ ತಪ್ಪು. ನನ್ನಷ್ಟಕ್ಕೆ ನಾನು ಹೋಗುವದು ಬಿಟ್ಟು ನಿಮ್ಮನ್ನು ಯಾಕೆ ಕೇಳಬೇಕು ?" ಎಂದು ಬಹಳ ಸಿಟ್ಟಿಗೆದ್ದು ಸುಮ್ಮನೆ ಕೂತನು.

ಬಳವಂತ— "ಛೇ, ಛೇ, ಸಿಟ್ಟಿಗೇಳಬೇಡ. ನೀನು ತೀವ್ರ ನಿನ್ನ ಉದ್ಯೋಗಕ್ಕೆ ಹತ್ತಬೇಕೆಂದೇ ನಾನು ಹಾಗೆ ಮಾತಾಡಿದೆ. ಮೇಲಾಗಿ ಈಗ ನಾನು ಗೋಶಾಲೆಯನ್ನು ಬಿಟ್ಟು ಹೋದರೆ ಶೇಟಜಿಯವರು ಏನಂದಾರು ?

ರಾಮನು— "ಯಾಕೆ, ನಿನ್ನ ಸಹಾಯಕನಾದ ರಾಮದಾಸನಿಲ್ಲವೇ ? ಒಂದು ತಿಂಗಳ ಮಟ್ಟಿಗೆ ಅವನಿಗೆ ಗೋಶಾಲೆಯನ್ನು ನಡೆಯಿಸಿಕೊಂಡು ಇರುವದಕ್ಕೆ ಆಗುವದಿಲ್ಲವೇ ?"

ಬಳವಂತ— "ಅಷ್ಟು ನೀನು ಆತುರನಾಗಿದ್ದರೆ, ನಾನು ಶೇಟಜಿಯನ್ನು ಕೇಳುತ್ತೇನೆ. ಆದರೆ ಎಲ್ಲಿಗೆ ಹೋಗುವದು ? ಯಾರು ಯಾರು ಹೋಗುವದು ?"

ರಾಮು– "ಉತ್ತರ ಹಿಂದುಸ್ಥಾನದ ಪ್ರವಾಸಕ್ಕೆ ಹೋಗತಕ್ಕದ್ದು. ನಾವು ಗಂಡಸರಷ್ಟೇ ಹೋಗತಕ್ಕದ್ದು."

ಶಾರದೆ– "ಅದೇಕೆ? ಹೆಂಗಸರೇನು ತಪ್ಪು ಮಾಡಿದ್ದು? ಅವರಿಗೇನು ಪ್ರವಾಸದ ಮೇಲೆ ಬಯಕೆಯಿಲ್ಲವೇ?"

ರಾಮು– "ಸುಮ್ಮನೆ ಊರೂರು ತಿರುಗಿದರೆ ಏನಾಗುತ್ತದೆ? ದುಡ್ಡು ಹಾಳು?" ಎಂದು ಆಕೆಯ ಶಬ್ದಗಳನ್ನೇ ಆಡಿ ಅಣಗಿಸಿದನು.

ನರ್ಮದಾ– "ದುಡ್ಡು ಹೆಂಗಸರಿಗಷ್ಟೇ ಹಾಳಾಗುತ್ತದೆಯೇ? ಗಂಡಸಿರಿಗೆ ಆಗುವದಿಲ್ಲವೇ? ನೀವು ಹೊರಟ ಮೇಲೆ ನಾವು ನಿಮ್ಮ ಹಿಂದೆಯೇ!"

ರಾಧಾಬಾಯಿ– "ಹೆಂಗಸರನ್ನು ಬಿಟ್ಟು ಹೋಗುವ ವಿಚಾರವು ಕೇವಲ ಸ್ವಾರ್ಥಬುದ್ಧಿ. ಸ್ತ್ರೀ ಶಿಕ್ಷಣ, ಸ್ತ್ರೀ ಶಿಕ್ಷಣವೆಂದು ಒದಬಡಿಸುತ್ತಿರುವವರು ಪ್ರವಾಸದ ಮಾತು ಬಂದಕೂಡಲೆ ಹೆಂಗಸರು ಬೇಡ. ಅವರಿಂದ ಇಲ್ಲದ ತೊಂದರೆವೆನ್ನುವರು. ನಮ್ಮ ಪೂರ್ವಜರು ತೀರ್ಥಯಾತ್ರೆಗೆ ಹೆಂಗಸರನ್ನು ಬಿಟ್ಟು ಹೋಗುತ್ತಿದ್ದರೋ!"

ಬಳವಂತ– "ಒಳ್ಳೇದು, ಹೆಂಗಸರನ್ನೂ ಕರೆದುಕೊಂಡು ಹೋಗತಕ್ಕದ್ದು. ಮುಖ್ಯವಾಗಿ ಅವರಿಗೆ ಪ್ರಯಾಗ, ಕಾಶೀ ಮೊದಲಾದ ಕ್ಷೇತ್ರಗಳನ್ನು ತೋರಿಸಲೇಬೇಕು. ಸಾಧ್ಯವಾದರೆ ಹರಿದ್ವಾರ, ಬದರೀ ಕೇದಾರ ಮುಂತಾದ ಸ್ಥಳಗಳಿಗೂ ಹೋಗಬಹುದು. ಆದರೆ ಹೆಂಗಸರನ್ನು ಕರೆದುಕೊಂಡು ಹಿಮಾಲಯದೊಳಗೆ ಹೋಗುವದೇನೋ ನನಗೆ ಸುಸಾಧ್ಯ ಕಾಣಿಸುವದಿಲ್ಲ" ಎಂದು ಬಳವಂತನು ನಿರ್ಣಯ ಹೇಳಿದನು.

ರಾಮು– "ಇದೇನಪ್ಪಾ, ನೀನು ಹೆಂಗಸರ ಪಕ್ಷವನ್ನು ವಹಿಸಿ ನಿರ್ಣಯವನ್ನು ಕೊಟ್ಟೆಯಲ್ಲಾ. ಆಗಲಿ. ಈ ಮಾಧವನನ್ನು ಮಾತ್ರ ನಾನು ಹಾದಿಯಲ್ಲಿ ಎತ್ತುಕೊಳ್ಳುವವನಲ್ಲ. ನೋಡು ನೀನೇನೋ, ಅವನೇನೋ. ಎಂದು ಶಾರದೆಯ ಮೋರೆ ನೋಡುತ್ತ ನುಡಿದನು.

ಶಾರದೆ– "ಏನೂ ಬೇಡ. ಗಂಡಸರ ಎತ್ತಿಕೊಳ್ಳೋಣವೇ ಬೇಡ. ನರ್ಮದೆಯೂ ಅತ್ತೆಯವರೂ ಇದ್ದ ಮೇಲೆ ನನಗೇನೂ ಚಿಂತೆಯಿಲ್ಲ. ನೀವು ನಿಮ್ಮ ಟ್ರಂಕೂ ಹಾಸಿಗೆಗಳನ್ನು ಸಂಭಾಳಿಸಿರಿ, ಅಂದರೆ ಆಯಿತು" ಎಂದು ಗಂಡನಿಗೆ ಉದ್ದೇಶಿಸಿ ನುಡಿದಳು.

ರಾಮುಬಾ— "ನೋಡಿದಿರಾ? ನನಗೆ ಕೊಟ್ಟ ಬಹುಮಾನದ ಕೆಲಸ. ಹಮಾಲರ ಕೆಲಸ ಗಂಡಸರಿಗೆ. ನೋಡಿರಿ, ಈಗಾಗಲೇ ಆರಂಭವಾಯಿತು. ಹೆಂಗಸರ ಅಧಿಕಾರ" ಎಂದು ಚೇಷ್ಟೆ ಮಾಡಿದನು.

ಬಳವಂತ— "ಹೌದು. ಹೌದು. ಅದರಲ್ಲೇನು ವಿಶೇಷ? ಗಂಡಸು ಹೆಂಡತಿಯ ಸೇವಕ. ಹೆಂಡತಿ, ಗಂಡನ ಅಡಿಗೆಯವಳು. ಅದರಲ್ಲಿ ಮಾನವೇನು? ಅಪಮಾನವೇನು?" ಎಂದು ಮುಕ್ತಾಯ ಮಾಡಿದನು.

ಈ ಪ್ರಕಾರ ತೀರ್ಥಯಾತ್ರೆಗೆ ಹೊರಡುವದು ಗೊತ್ತಾಯಿತು. ಶೇಟಜಿ ಭಗವಾನದಾಸರೂ ಬಳವಂತರಾಯನಿಗೆ ಹೋಗಲಿಕ್ಕೆ ಸಮ್ಮತಿಯನ್ನು ಕೊಟ್ಟರು. ಇದಲ್ಲದೆ ಅವರಿಗೆ ಇಳಿದುಕೊಳ್ಳಲಿಕ್ಕೆ ಪ್ರಯಾಗ, ಕಾಶೀ ಮೊದಲಾದ ಸ್ಥಳಗಳಲ್ಲಿಯ ಗುಜರಾಥೀ ಗೃಹಸ್ಥರಿಗೆ ಪರಿಚಯ ಪತ್ರಗಳನ್ನೂ ಕೊಟ್ಟರು. ಶೇಟಜಿಯವರು ಎರಡು ಸಾರೆ ಉತ್ತರದ ಯಾತ್ರೆಯನ್ನು ಮಾಡಿಕೊಂಡು ಬಂದಿದ್ದರು. "ಮೈಯಲ್ಲಿ ಚನ್ನಾಗಿ ಕಸುವು ಇದ್ದಾಗಲೇ ತೀರ್ಥಯಾತ್ರೆಗಳಿಗೆ ಹೋಗಬೇಕು. ಕೈಕಾಲುಗಳಲ್ಲಿ ಶಕ್ತಿ ಕಡಿಮೆಯಾದ ಮೇಲೆ ತೀರ್ಥಯಾತ್ರೆ ಮಾಡುವದರಲ್ಲಿ ಸ್ವಾರಸ್ಯವಿಲ್ಲ" ಎಂದು ಹೇಳಿ ಅವರಿಗೆ ತುಂಬಾ ಪ್ರೋತ್ಸಾಹವನ್ನು ಕೊಟ್ಟರು. ಎರಡು ದಿವಸಗಳವರೆಗೆ ಪ್ರಯಾಣದ ಸಿದ್ಧತೆ ನಡೆಯಿತು. ಫರಾಳವನ್ನು ಈಡಾಗಿ ಕಟ್ಟಿಕೊಂಡರು. ನಾತಾಳಿಯ ರಜೆಯು ಆರಂಭವಾಗುತ್ತಲೇ ಅವರು ಚಂದ್ರಪುರದಿಂದ ಹೊರಟು ಮರುದಿನ ಮುಂಜಾನೆ ಪುಣೆಗೆ ಬಂದು ಮುಟ್ಟಿದರು. ಪುಣೇ ಪಟ್ಟಣವನ್ನು ನೋಡಬೇಕೆಂದು ಹೆಂಗಸರ ಅಪೇಕ್ಷೆ ಬಹಳ ಇದ್ದದರಿಂದ ಅಲ್ಲಿ ಇಳಿದು ಊರೊಳಗೆ ಹೋದರು.

ಅವರು ಪುಣೆಯಲ್ಲಿ ಇಳಿದದ್ದು ಒಬ್ಬ ಕನ್ನಡ ಸ್ನೇಹಿತನ ಮನೆಯಲ್ಲಿ. ಅವನ ಹೆಸರು ಕೇಶವರಾವ ಬಿಜಾಪೂರಕರ. ಅವನೊಬ್ಬ ಎಮ್. ಎ. ಪದವೀಧರನಿದ್ದು ಒಂದು ಹಾಯಸ್ಕೂಲಿನಲ್ಲಿ ಶಿಕ್ಷಕನಾಗಿದ್ದನು. ಅವನು ಬಳವಂತರಾಯನ ಬಾಲ್ಯ ಸ್ನೇಹಿತನು. ಅವನು ಬಂದ ಅತಿಥಿಗಳಿಗೆ ಬಹಳ ಆದರ ಸತ್ಕಾರ ಮಾಡಿದನು. ಅವನ ಆಗ್ರಹದ ಮೂಲಕವಾಗಿ ಈ ಮಂಡಲಿಯು ಎರಡು ದಿವಸಗಳವರೆಗೆ ಪುಣೆಯಲ್ಲಿಯೇ ಉಳಿದರು.

ಸಾಯಂಕಾಲ ನಾಲ್ಕು ಘಂಟೆಗೆ ಎಲ್ಲರೂ ಪಟ್ಟಣವನ್ನು ನೋಡಲಿಕ್ಕೆ

ಹೊರಟರು. ಮೊದಲು ಶನಿವಾರ ವಾಡೆಯನ್ನು ನೋಡಿಕೊಂಡು ಆ ಮೇಲೆ 'ತುಳಸೀ ಬಾಗ' ಎಂಬ ದೇವಾಲಯಕ್ಕೆ ಬಂದರು. ದೇವಾಲಯದ ಪ್ರಾಕಾರವು ಬಹಳ ವಿಶಾಲವಾದದ್ದು. ಗುಡಿಯ ಸಭಾಮಂಟಪವು ವಿಶಾಲವಾಗಿದ್ದು ಅಲ್ಲಿ ಒಂದು ಹರಿಕೀರ್ತನೆ ನಡೆದಿತ್ತು. ದೇವರ ದರ್ಶನಕ್ಕೆ ಹೋಗುವವರಿಗೂ ಬರುವವರಿಗೂ ತೆರಪೇ ಇದ್ದಿಲ್ಲ. ಜನರ ಸಂದಣಿಯಲ್ಲಿ ದೇವರ ದರ್ಶನವಾಗುವದೇ ಪ್ರಯಾಸವಾಗಿದ್ದಿತು. ಕೀರ್ತನಕ್ಕೆ ಗಂಡಸರೂ ಹೆಂಗಸರೂ ಬೇರೆ ಬೇರೆ ಸ್ಥಳಗಳಲ್ಲಿ ಕೂತಿದ್ದರು. ನಮ್ಮ ಜನರೂ ಹೋಗಿ ಯೋಗ್ಯವಾದ ಸ್ಥಳಗಳಲ್ಲಿ ಕೂತುಕೊಂಡರು. ನಡೆದದ್ದು ಶ್ರೀರಾಮನು ವನವಾಸಕ್ಕೆ ಹೋದ ಕಥೆ. ಶೋಕ ರಸದಿಂದಲೂ ಕರುಣಾ ರಸದಿಂದಲೂ ತುಂಬಿ ತುಳುಕುವಂಥಾದ್ದು. ಕೂತ ಜನರಿಗೆ ಕತೆಯ ಕಡೆಗೆ ಲಕ್ಷ್ಯವೇ ಇದ್ದಿಲ್ಲ. ಹೆಂಗಸರಲ್ಲಿ ಕೆಲವರು ಹರಟೆ ಹೊಡೆಯುತ್ತಿದ್ದರು. ಬೇರೆ ಕೆಲವರು ಬರ ಹೋಗುವ ಜನರನ್ನು ನಿರುಕಿಸುತ್ತಿದ್ದರು. ಕೆಲವು ಗಂಡಸರು ಕೇವಲ ಸ್ತ್ರೀಯರನ್ನು ನೋಡುವದಕ್ಕಾಗಿಯೇ ಬಂದಂತೆ ತೋರುತ್ತಿತ್ತು. ಗುಡಿಯ ಸುತ್ತಲಿನ ಪ್ರಾಕಾರದಲ್ಲಿ ಅನೇಕ ಅಂಗಡಿಗಳು. ಅಲ್ಲಿ ಹೆಂಗಸರು ಭರದಿಂದ ವ್ಯಾಪಾರವನ್ನು ನಡೆಯಿಸಿದ್ದರು. ಇಷ್ಟೆಲ್ಲಾ ಗದ್ದಲದಲ್ಲಿ ಹರಿಕಥೆ. ಕತೆಗಾರನು ಇದಾವುದನ್ನೂ ಲೆಕ್ಕಿಸದೆ ಆದಷ್ಟು ದೊಡ್ಡ ದನಿಯಿಂದ ಒದರುತ್ತ ಅಡ್ಡ ಕಥೆಗಳಿಂದ ಜನರ ಲಕ್ಷ್ಯವನ್ನು ಸೆಳೆಯಲಿಕ್ಕೆ ವಿಶ್ವಪ್ರಯತ್ನ ಮಾಡುತ್ತಿದ್ದನು ಇದೀಗ ನಮ್ಮ ದೇವಾಲಯಗಳ ಸ್ಥಿತಿಯು. ದೇವಾಲಯವನ್ನು ಸಮೀಪಿಸಿದಂತೆ ಶಾಂತತೆಗೂ ಮನಸ್ಸಿನ ಪರಿಶುದ್ಧತೆಗೂ ಬಹಿಷ್ಕಾರ. ದೇವಾಲಯವು ಶಾಂತ ಸ್ಥಳದಲ್ಲಿ ಇರಬೇಕು; ಅದರ ಒಳಗೂ ಹೊರಗೂ ಶಾಂತತೆಯಿರಬೇಕು; ಅದರ ಆವಾರದಲ್ಲಿ ಅಂಗಡಿಗಳೂ ಮನುಷ್ಯರ ವಸತಿಗಳೂ ಇರಬಾರದು; ಇವೆಲ್ಲ ಭಾವನೆಗಳು ನಮ್ಮ ಧರ್ಮದಿಂದ ವಿಹಿತವಾಗಿದ್ದರೂ ಆಚಾರದಲ್ಲಿ ಇವುಗಳಿಗೆ ಎಡೆಯಿಲ್ಲ.

ಬಳವಂತರಾಯನು ಕೂತುಕೊಂಡ ಸ್ಥಳದಿಂದ ಮೊದಲು ಎದ್ದನು. ಅವನು ಎದ್ದಾಕ್ಷಣವೇ ರಾಮರಾಯನೂ ಅಪ್ಪಾಸಾಹೇಬನೂ ಎದ್ದು ಹೋದರು. ಗಂಡಸರೆಲ್ಲರೂ ಹೊರಗೆ ಹೋಗಲು ಹೆಂಗಸರೂ ಅವರನ್ನು ಹಿಂಬಾಲಿಸಿದರು.

ಮುಂದೆ ಅವರು 'ಬೇಲಬಾಗ' ಎಂಬ ಗುಡಿಗೆ ಹೋದರು. ಅಲ್ಲಿ ಪುರಾಣಶ್ರವಣವು ನಡೆದಿತ್ತು. ಅಲ್ಲಿಯೂ ಇದೇ ತರದ ಗಲಾಟೆ, ಜನರ ಸಂದಣಿ, ವ್ಯಾಪಾರದ ಗದ್ದಲ.

ನಮ್ಮ ಜನರು ಮುಂದೆ ನೆಟ್ಟಗೆ ಮನೆಗೆ ಹೋದರು. ಮರುದಿವಸ ಸಾಯಂಕಾಲ ಮೊದಲೇ ಗೊತ್ತು ಮಾಡಿದಂತೆ ಎಲ್ಲರೂ 'ಪರ್ವತಿ' ಎಂಬ ಪಾರ್ವತಿಯ ದೇವಸ್ಥಾನಕ್ಕೆ ಹೋದರು. ಕೇಶವರಾಯನೂ ಅವನ ಪತ್ನಿಯೂ ಇವರೆಲ್ಲರ ಜೊತೆಗೆ ಹೋದರು. ಪರ್ವತಿಯು ಗುಡ್ಡದ ಮೇಲಿನ ಗುಡಿ. ಗುಡಿಗೆ ಹೋಗಲಿಕ್ಕೆ ಪಾವಟಿಗೆಗಳು. ಗುಡಿಯ ಕಟ್ಟಡವು ಸಾಧಾರಣವಾದದ್ದು. ಆದರೆ ಗುಡ್ಡದ ಮೇಲೆ ಕಾಣುವ ಪಟ್ಟಣದ ನೋಟಗಳು ಬಹು ರಮಣೀಯವಾದವುಗಳು. ಅಲ್ಲಿಂದ ಪುಣೆಯ ಬಹುತರದ ಎಲ್ಲ ಪ್ರೇಕ್ಷಣೀಯ ಸ್ಥಳಗಳನ್ನು ವಿಹಂಗಮ ದೃಷ್ಟಿಯಿಂದ ನೋಡಬಹುದು. ಸೃಷ್ಟಿಶೋಭೆಯೂ ಬಹಳ ಆಹ್ಲಾದಕರವಾಗಿ ಕಾಣುವದು. ಸೂರ್ಯನು ಮುಳುಗುವ ಕಾಲಕ್ಕೆ ಪಶ್ಚಿಮಾಕಾಶದ ಸೃಷ್ಟಿಸೌಂದರ್ಯವು ನಾಸ್ತಿಕನಿಗೂ ಕೂಡ ಸೃಷ್ಟಿಕರ್ತನ ಅಸ್ತಿತ್ವದ ಅರಿವನ್ನುಂಟು ಮಾಡುವದು; ಆಸ್ತಿಕನಲ್ಲಿ ಈಶ್ವರ ಭಕ್ತಿಯನ್ನು ಹೆಚ್ಚಿಸುವದು. ಇಂಥ ಕಾಲವು ದೇವರ ಧ್ಯಾನಕ್ಕೂ ಪ್ರಾರ್ಥನೆಗೂ ಒಳ್ಳೇ ಅನುಕೂಲವು. ಇಂಥ ಸ್ಥಳವು ಉಪಾಸನೆಗೆ ತುಂಬಾ ಸಹಕಾರಿಯು. ಹೀಗೆ ವಿಚಾರ ಮಾಡಿ ಬಳವಂತನು ಅಲ್ಲಿಯೇ ನೀರು ತಂದುಕೊಂಡು ತನ್ನ ಸಂಧ್ಯಾವಂದನವನ್ನು ಮುಗಿಸಿದನು. ಉಳಿದವರು ಸಂಧ್ಯೆಯನ್ನು ಮಾಡದಿದ್ದರೂ ಧ್ಯಾನಸ್ಥರಾಗಿ ಕೂತುಕೊಂಡಿದ್ದರು.

ಮರುದಿವಸ ಪ್ರವಾಸಕ್ಕೆ ಹೊರಡಬೇಕೆಂದು ನಮ್ಮ ಮಂಡಲಿಯ ಮನಸ್ಸು. ಆದರೆ ಕೇಶವರಾಯನು ಹಬ್ಬದೂಟದ ನಿಮಿತ್ತದಿಂದ ಅವರೆಲ್ಲರಿಗೆ ತಡೆ ಹಾಕಿದನು. ಅವನು ಇದೇ ವೇಳೆಗೆ ಪುಣೆಯಲ್ಲಿ ಕೆಲವು ಪ್ರತಿಷ್ಠಿತ ಗೃಹಸ್ಥರಿಗೂ ಅವರ ಮನೆಯ ಸ್ತ್ರೀಯರಿಗೂ ಭೋಜನಕ್ಕೆ ಕರೆದಿದ್ದನು. ಅವರ ಪರಿಚಯವನ್ನು ನಾವು ಮೊದಲು ವಾಚಕರಿಗೆ ಮಾಡಿಕೊಡಲಿಕ್ಕೆ ಬೇಕು.

ಶಂಕರರಾವ ದೇಶಮುಖ ಇವರು ಮುಂಬಯಿಯಲ್ಲಿ ಹಾಯಕೋರ್ಟ ವಕೀಲರಾಗಿ ಸ್ವಲ್ಪ ದಿವಸಗಳಲ್ಲಿಯೇ ತಮ್ಮ ಬುದ್ಧಿಮತ್ತೆಯಿಂದಲೂ ವಾಕ್

ಚಾತುರ್ಯದಿಂದಲೂ ತಮ್ಮ ಉದ್ಯೋಗದಲ್ಲಿ ಹೆಸರನ್ನು ಪಡೆದು ಧನವಂತರಾಗಿದ್ದರು. ಶಂಕರರಾಯರ ಕುಟುಂಬ ಗಿರಿಜಾಬಾಯಿಯವರು. ಅವರು ಕಲಿತವರಲ್ಲ. ಶಿಕ್ಷಣವಿಲ್ಲದಿದ್ದರೂ ಮುಂಬಯಿಯಲ್ಲಿದ್ದುದರಿಂದ ನವಯುಗದ ರೀತಿನಡಾವಳಿಗಳನ್ನು ಅರಿತಿದ್ದರು. ಅವರ ಮಗ ವಿನಾಯಕನು ಅದೇ ವರ್ಷ ಎಲ್ ಎಲ್ ಬಿ. ಪರೀಕ್ಷೆಯಲ್ಲಿ ಉತ್ತೀರ್ಣನಾಗಿದ್ದನು. ಅವನು ಕೇಶವರಾಯನ ಸಹಾಧ್ಯಾಯಿ. ಇಬ್ಬರಿಗೂ ಬಹುದಿವಸದ ಸ್ನೇಹವಿತ್ತು. ಕೇಶವರಾಯನು ಮುಂಬಯಿಗೆ ಹೋದರೆ ವಿನಾಯಕರಾಯನಲ್ಲಿಯೇ ಯಾವಾಗಲೂ ಇಳಿಯುವನು. ವಿನಾಯಕನ ತಂಗಿಯ ಹೆಸರು ಕಮಲಾದೇವಿ. ಆಕೆ ಅದೇ ವರ್ಷ ಬಿ. ಎ. ಪರೀಕ್ಷೆಯಲ್ಲಿ ಪಾಸಾಗಿದ್ದಳು. ಅವಳ ವಯಸ್ಸು ಇಪ್ಪತ್ತೊಂದು ಇರಬಹುದು. ವಿನಾಯಕನು ಅವಳಿಗಿಂತ ಮೂರು ವರ್ಷ ಹಿರಿಯನು. ಶಂಕರರಾಯರು ತಮ್ಮ ಹೆಂಡತಿಮಕ್ಕಳೊಡನೆ ಪುಣೆಗೆ ಬಂದು ತಮ್ಮ ಒಬ್ಬ ಮಿತ್ರನಲ್ಲಿ ಇಳಿದುಕೊಂಡಿದ್ದರು. ಈ ವರ್ಷ ಕಮಲಾದೇವಿಯ ವಿವಾಹವನ್ನು ಮಾಡಿಬಿಡಬೇಕೆಂದು ಅವರ ಹಂಬಲವು. ವರಶೋಧನೆಗಾಗಿ ಪುಣೆಗೆ ಬಂದಿದ್ದರು. ಮೂರು ನಾಲ್ಕು ವರಗಳನ್ನು ಇಷ್ಟರೊಳಗಾಗಿಯೇ ನೋಡಿದ್ದರು. ಆದರೆ ಕಮಲಾದೇವಿಯ ಮನಸ್ಸಿಗೆ ಯಾವ ವರನೂ ಬರಲಿಲ್ಲ. ಮಗಳು ಪ್ರೌಢೆಯಾದ್ದರಿಂದ ಅವಳ ಪೂರ್ಣ ಸಮ್ಮತಿಯಿಲ್ಲದೆ ವರನನ್ನು ಗೊತ್ತು ಮಾಡಬಾರದೆಂದು ಶಂಕರರಾಯರು ಸಂಕಲ್ಪ ಮಾಡಿದ್ದರು.

ಹಬ್ಬದೂಟದ ಸಿದ್ಧತೆಯು ಸರಿಯಾಗಿ ಹನ್ನೊಂದು ಘಂಟೆಗೆ ಪೂರ್ತಿಯಾಗಿತ್ತು. ಹೆಂಗಸರಿಗೆ ಬೇರೆ ಗಂಡಸರಿಗೆ ಬೇರೆ ಊಟಕ್ಕೆ ಕೂಡ್ರುವ ಏರ್ಪಾಡು ಮಾಡಿದ್ದರು. ಕಮಲಾದೇವಿಯು ಮಾತ್ರ ಅಣ್ಣನ ಅತ್ಯಾಗ್ರಹದ ಮೂಲಕ ಗಂಡಸರ ಪಂಕ್ತಿಯಲ್ಲಿಯೇ ಕುಳಿತಿದ್ದಳು. ಬೆಳ್ಳಿಯ ತಾಟುಗಳೂ ಬಟ್ಟಲುಗಳು ಮಣೆಗಳೂ ಮಂಡಿಸಲ್ಪಟ್ಟಿದ್ದುವು. ರಂಗವಲ್ಲಿಯ ಶೃಂಗಾರಕ್ಕೂ ಊದಿನಕಡ್ಡಿಗಳ ಸುವಾಸನೆಗೂ ಏನೂ ಕೊರತೆಯಿದ್ದಿಲ್ಲ. ಎರಡು ಪಕ್ವಾನ್ನಗಳೂ ವಿಧವಿಧದ ವ್ಯಂಜನ ಪದಾರ್ಥಗಳೂ ಅತಿಥಿಗಳ ನಾಲಿಗೆಯ ಬಯಕೆಗಳನ್ನು ತಣಿಸಿದವು. ಮೇಲೆ ಕೇಶವರಾಯನು ಆಗ್ರಹದಿಂದ ಎಲ್ಲರಿಗೂ ಹೆಚ್ಚು ಹೆಚ್ಚು ಹಾಕಿಸುವದು. ಬಳವಂತರಾಯನಿಗೆ

ಮಾತ್ರ ಈ ಶ್ರೀಮಂತಿಕೆಯು ಆಡಂಬರವೂ ಆಗ್ರಹದಿಂದ ಬಡಿಸುವ ಹುಚ್ಚಾಟವೂ ಸೇರಲಿಲ್ಲ. ಆವನು ತನಗೆ ಬೇಕಾದಷ್ಟನ್ನೇ ಉಂಡು ಹೆಚ್ಚಿನವನ್ನು ಚೆಲ್ಲಿಬಿಟ್ಟನು. ಉಳಿದವರು ಹೆಚ್ಚು ಹೆಚ್ಚಾಗಿ ಉಂಡು ಮೇಲೆ ಇನ್ನೊಬ್ಬರ ಹೊಟ್ಟೆತುಂಬುವಷ್ಟು ಚಲ್ಲಿಕೊಟ್ಟರು.

ಊಟವಾಗಿ ತಾಂಬೂಲ ಸವಿಯುವದಾಯಿತು. ಅಪೂರ್ವವಾದ ಹಬ್ಬದೂಟವನ್ನು ಮಾಡಿಸಿದ್ದಕ್ಕೆ ಶಂಕರರಾಯರು ಕೇಶವರಾಯನಿಗೆ ಧನ್ಯವಾದಗಳನ್ನು ಸಮರ್ಪಿಸಿದರು. ಕೂಡಲೆ

ಬಳವಂತರಾಯನು "ನಾನು ಮಾತ್ರ ಈ ಹಬ್ಬದೂಟಕ್ಕಾಗಿ ನಿನ್ನನ್ನು ಅಭಿನಂದಿಸಲಾರೆ. ಪೂರ್ಣವಾಗಿ ಸುಧಾರಣೆಯಲ್ಲಿ ಮುಂದಾದ ಪುಣೆಯಲ್ಲಿದ್ದುಕೊಂಡು ನೀನು ದುಂದು ಮಾಡುವದೂ ಹೆಚ್ಚು ಹೆಚ್ಚು ಹಾಕಿಸಿ ಚೆಲ್ಲಿಸುವುದೂ ನನ್ನ ಮನಸ್ಸಿಗೇನೂ ಬರಲಿಲ್ಲ. ನೀನು ಶುದ್ಧ ಕನ್ನಡಿಗ ನೋಡು" ಎಂದು ಮೆತ್ತಗಿನ ದನಿಯಿಂದ ನುಡಿದನು.

ಕೂಡಲೆ ರಾಮರಾಯನ ಟೀಕೆಗೆ ಮೊದಲಾಯಿತು. "ಓಹೋ! ಶುದ್ಧ ಕನ್ನಡಿಗನಾಗದಿದ್ದರೆ ಪುಣೆಯಲ್ಲಿ ಇದ್ದತಪ್ಪಿಗೆ ಶುದ್ಧ ಮರಾಟಿಗನಾಗಬೇಕೇ? ನಿನ್ನ ಮಾತು ಕೇಳಿದರೆ ನಮ್ಮೆಲ್ಲರ ಹೊಟ್ಟೆಯಮೇಲೆ ಕಾಲುಬರುವದೇ ನಿಶ್ಚಯ."

ಬಳವಂತ– "ರಾಮೂ, ಅರಹೊಟ್ಟೆ ಊಟಕ್ಕೆ ಹಾಕಬೇಕೆಂದು ಯಾರೂ ಅನ್ನುವದಿಲ್ಲ. ಒಂದೊಂದು ಪದಾರ್ಥವನ್ನು ಎರಡು ಮೂರು ಸಾರೆ ಪ್ರತಿಯೊಬ್ಬರಿಗೆ ಕೇಳಿದರೆ ಸಾಲದೆ? ಎಲೆಯಮೇಲೆ ಚಲ್ಲಿದರೇ ಹಬ್ಬದೂಟವು ಪೂರ್ಣವಾಯಿತೇ?"

ಶಂಕರರಾವ– "ಒಂದೊಂದು ಪ್ರಸಂಗದಲ್ಲಿ ದುಂದು ಮಾಡಬೇಕಾಗುತ್ತದೆ. ಕೈ ಸಡಿಲು ಬಿಡಬೇಕಾಗುತ್ತದೆ. ಇಲ್ಲದಿದ್ದರೆ ಶಿಷ್ಟ ಸಾಂಪ್ರದಾಯಗಳನ್ನು ಮೀರಿದಂತಾಗುವದು. ಸಮಾಜದಲ್ಲಿದ್ದಮೇಲೆ ನಾಲ್ಕು ಮಂದಿ ಮೆಚ್ಚುವಂತೆ ನಡೆಯದಿದ್ದರೆ ನಮ್ಮನ್ನು ಯಾರೂ ಮುಂದಕ್ಕೆ ಕರೆಯುವದಿಲ್ಲ."

ಕೇಶವರಾವ– "ಬಳವಂತರಾಯರೇ, ನಾನು ಆಡಬೇಕಾದ ಮಾತು

ಗಳನ್ನೇ ಶಂಕರರಾಯರು ಆಡಿದರು. ನಾವು ಇಂಥ ಪ್ರಸಂಗ ವಿಶೇಷಗ ಳಲ್ಲಿ ಕೈ ಸಡಿಲುಬಿಡದಿದ್ದರೆ ಜನರು ಜೀನ, ಚಿಪುಣ, ಎಂದು ನಮಗೆ ಹೆಸರಿ ಡುವರು."

ರಾಮರಾಯ– "ಸರಿಯಾದ ಮಾತು. ಯಾಕೆ ಬಳವಂತರಾಯರೇ, ಇದಕ್ಕೆ ನಿಮ್ಮ ಬಾಯಿ ಕಟ್ಟಾಯಿತು? ವಾದದಲ್ಲಿ ಸೋತೆನೆಂದು ಜಯ ಪತ್ರ ಬರೆದುಕೊಟ್ಟುಬಿಡು. ಸುಮ್ಮನೇ ಏಕೆ ತ್ರಾಸ?"

ಬಳವಂತರಾಯ ಕಿರುನಗೆ ನಗುತ್ತ– "ರಾಮೂ, ಸೋಲು ಗೆಲವು ಗಳ ದೆಸೆಯಿಂದ ನಾನೆಂದಿಗೂ ವಾದಿಸುವದಿಲ್ಲ. ಪರಸ್ಪರ ವಿಚಾರವಿನಿಮಯ ವಾಗಿ ಸತ್ಯಶೋಧನೆಯಾಗಬೇಕೆಂಬದೇ ನನ್ನ ಉದ್ದೇಶ." ಕೇಶವರಾಯನಿಗೆ ಉದ್ದೇಶಿಸಿ– "ಇದು ನೋಡು ಕೇಶವರಾವ. ನೀನು ಈ ಹೊತ್ತು, ಬಹಳ ದಿನಕ್ಕೆ ಮಿತ್ರರು ಬಂದಿದ್ದಾರೆಂದು ತುಪ್ಪದ ಕಾಲುವೆಯನ್ನೇ ಹರಿಸಿಬಿಟ್ಟಿ. ನಾನು ಕೇವಲ ದೋಷ ಹುಡುಕುವ ಬುದ್ಧಿಯಿಂದ ಮಾತಾ ಡುತ್ತೇನೆಂದು ನೀನೇನೂ ತಿಳಿಯುವದಿಲ್ಲೆಂದು ನನ್ನ ಪೂರ್ಣ ಭರವಸೆ. ಅಂತೇ ನಾನು ಬಾಯಿಬಿಟ್ಟು............"

ಕೇಶವರಾಯ– "ಹೌದುಹೌದು, ಅದರೊಳಗೇನದೆ? ನಿನ್ನ ಸ್ವಭಾವ ನನಗೆ ಗೊತ್ತಿಲ್ಲವೇ?" ಎಂದು ಅವನಿಗೆ ಉತ್ತೇಜನ ಕೊಟ್ಟನು.

ಬಳವಂತರಾಯ–"ಇದುನೋಡು, 'ಸಮಾಜ. ಸಮಾಜ' ಎಂದು ನಾವು ಅಲ್ಲದ್ದಕ್ಕೂ ಸಲ್ಲದ್ದಕ್ಕೂ ಎಷ್ಟು ಅಂಜಬೇಕು? ದೇಶಸಮಾಜಗಳ ಸ್ಥಿತಿಯ ಕಡೆಗೆ ಸುಶಿಕ್ಷಿತರಾದ ನಾವಾದರೂ ಗಮನವನ್ನಿತ್ತು ಅಶಿಕ್ಷಿತರಿಗೆ ಮೇಲುಪಂಕ್ತಿಯನ್ನು ಹಾಕಿಕೊಡಬೇಡವೇ? ಮದುವೆಮುಂಜಿಜಾವಳ ಗಳಲ್ಲಿ, ಹಬ್ಬಹುಣ್ಣಿವೆಗಳಲ್ಲಿ, ಶ್ರಾದ್ಧಪಕ್ಷಗಳಲ್ಲಿ, ಉತ್ತರಕ್ರಿಯೆಗಳಲ್ಲಿ ಜನರು ಎಷ್ಟು ತಮ್ಮ ಯೋಗ್ಯತೆಮೀರಿ, ಸಮಾಜದ ಸ್ಥಿತಿಗತಿಗಳನ್ನು ದುರ್ಲ ಕ್ಷಿಸಿ ವೆಚ್ಚ ಮಾಡುತ್ತಾರೆಂಬದು ನಮಗೆ ಗೊತ್ತಿಲ್ಲವೇ? ಸಾಲಮಾಡಿ ಪಕ್ವಾನ್ನಗಳನ್ನು ಮಾಡಿಸಿ ಒಂದುಪಾಲು ತಿನ್ನುವದು, ನಾಲ್ಕು ಪಾಲು ಚೆಲ್ಲುವದು– ಇದು ಧರ್ಮವೇ? ವೈದಿಕರಿಗಂತೂ ನಾವು ಆಗ್ರಹ ಮಾಡಿ ಮಾಡಿ ಅವರು ಓಲ್ಲೆಂದರೂ ಉಣಬಡಿಸಿ ಅವರು ಜಡದೇಹಿಗಳೂ ರೋಗಾ ರಿಗಳೂ ಆಗುವಂತೆ ಮಾಡಿದ್ದೇವೆ. ಸ್ನೇಹಿತರ ಸಂಗಡಲೂ ಆಪ್ತೇಷ್ಟರ

ಸಂಗಡಲೂ ಇದೇ ಪರಿಯು ಆಗ್ರಹ— ಇದೇ ಪರಿಯು ಸಡಗರದ ಊಟ ಉಡಿಗೆ— ಇದೇ ತರದ ದುಂದು. ನಾವು ಹಿಂದೀಯರು— ವಿಶೇಷತಃ ಕನ್ನಡಿಗರು ಈ ಪ್ರಕಾರ ದುಂದುಮಾಡಿ ಸಾಲದಲ್ಲಿ ಮುಳುಗಿ ನಮ್ಮ ಮನೆತನವನ್ನೂ ಸಮಾಜವನ್ನೂ ಹೀನದೆಸೆಗೆ ತಂದಿರುತ್ತೇವೆ. 'ಹಾಸಿಗೆ ಇದ್ದಷ್ಟು ಕಾಲು ಚಾಚಬೇಕು' ಎಂಬ ಸಾಮಾನ್ಯ ನಿಯಮವನ್ನು ಕೂಡ ನಾವು ಉದ್ಧರಿಸಿಕೊಳ್ಳುವವರು, ಕೇವಲ ಸುಳ್ಳು ದಾಕ್ಷಿಣ್ಯಕ್ಕಾಗಿ, ನಾವು ಬಡವರಿದ್ದರೂ ಶ್ರೀಮಂತರೆಂದು ಜಂಭ ಒಡೆಯುವದಕ್ಕಾಗಿ ಮರೆತು ಬಿಟ್ಟಿದ್ದೇವೆ.”

ಕಮಲಾದೇವಿಯು ಬಳವಂತರಾಯನ ಮಾತುಗಳ ಅರಳಿದ ಮೊಗದಿಂದ, ಕಿವಿಗೊಟ್ಟು ಕೇಳುತ್ತಿದ್ದಳು. ಅವನು ಯಾರ ದಾಕ್ಷಿಣ್ಯವೂ ಇಲ್ಲದೆ ಅಂತಃಕರಣವನ್ನು ಬಿಚ್ಚಿ ಮಾತಾಡುವದನ್ನು ನೋಡಿ ಮೆಚ್ಚಿ ತಾನೂ ವಾದದಲ್ಲಿ ಮೈಚಳಿಬಿಟ್ಟು ಸೇರಲನುವಾದಳು. ಅವಳು ಬಳವಂತರಾಯನನ್ನು ಉದ್ದೇಶಿಸಿ ಕೆಳಗೆ ನೋಡುತ್ತ ನುಡಿದಳು. “ನೀವು ಹೇಳಿದ್ದೇನೋ ತುಂಬಾ ಸರಿಯಾಗಿದೆ. ಆದರೆ ನೀವು ಒಂದು ಅಂಶವನ್ನು ಬಿಟ್ಟಂತೆ ನನಗೆ ಅನಿಸುತ್ತದೆ. ಅದಾವದೆಂದರೆ— ದೀನ ದರಿದ್ರವಾದ ಬಹುಜನಸಮಾಜದ ಹಿತ. ನಾವೆಲ್ಲರೂ ಯೋಗ್ಯತೆಯೊಳಗೇ ವೆಚ್ಚಮಾಡಿ ನಾಲ್ಕು ದುಡ್ಡು ಉಳಿಸಿ ಪರೋಪಕಾರಕ್ಕಾಗಿ ವಿನಿಯೋಗಿಸುವದು ನಮ್ಮ ಕರ್ತವ್ಯವಲ್ಲವೇ?”

ಬಳವಂತರಾಯನು ಕಮಲಾದೇವಿಯ ಉದಾತ್ತ ವಿಚಾರವನ್ನು ನೋಡಿ ಹಿಗ್ಗಿದ ಎದೆಯವನಾಗಿ ಅವಳ ಮಾತನ್ನೇ ಎತ್ತಿ ಹಿಡಿದು ಸಾಗಿದನು

“ಕಮಲಾದೇವಿಯವರೇ, ನೀವು ಒಳ್ಳೇ ವಿಚಾರವನ್ನು ಮುಂದಿಟ್ಟಿರಿ. ನಮ್ಮ ದೇಶದ ಜನರ ಕಂಗಾಲಸ್ಥಿತಿ, ಒಪ್ಪತ್ತು ಕೂಡ ಹೊಟ್ಟೆತುಂಬ ಅನ್ನವಿಲ್ಲದೆ ಆಯುಷ್ಯವನ್ನು ದೂಡುವ ಅಪರ ಬಡತನ, ಈ ಬಡತನಕ್ಕಾಗಿ ಶಿಕ್ಷಣಕ್ಕೆ ಎರವಾಗಿ ಹೇಗಾದರೂ ಹೊಟ್ಟೆ ಹೊರೆಕೊಳ್ಳಲಿಕ್ಕೆ ಚಿಕ್ಕವಯಸ್ಸಿನಲ್ಲಿಯೂ ದುಡಿಯುವ ಬಡವರ ಮಕ್ಕಳ ದುರ್ದಶೆ, ಕೆಲಸವಿಲ್ಲದೆ ಓಣಿಗುಂಟ ತಿರುಗಾಡುವ ನಮ್ಮ ವಿದ್ಯೆಗಲಿತ ತರುಣರ ಸಮೂಹ, ಇವುಗಳನ್ನು ಸ್ವಲ್ಪ ಸಹಾನುಭೂತಿಯಿಂದ ನಿರುಕಿಸಿ ನೋಡುವವರಿಗೆ ಎದೆಯು ಬೆಂದು ಬಳಲ

ಲಿಕ್ಕೆ ಬೇಕು. ನಾವು ಹೊಟ್ಟೆಯನ್ನು ಕಟ್ಟಿ ಬಡಜನರಿಗೂ ಬಡವಿದ್ಯಾರ್ಥಿಗಳಿಗೂ, ಸಮಾಜೋಪಯುಕ್ತವಾದ ವ್ಯವಸ್ಥೆಗಳಿಗೂ ಸಹಾಯ ಮಾಡದಿದ್ದರೂ ನಮ್ಮ ವಿಲಾಸಗಳನ್ನು ಬಿಟ್ಟು, ಪಕ್ವಾನ್ನಗಳನ್ನು ಬಿಟ್ಟು, ಪೌಲಿಸವೇಷಗಳನ್ನು ಬಿಟ್ಟು, ಚಹಾ ಸಿಗಾರೇಟು ಮೊದಲಾದ ವ್ಯಸನಗಳನ್ನು ಬಿಟ್ಟು ಉಳಿಯುವ ಹಣದಿಂದಾದರೂ ಸಹಾಯ ಮಾಡಬೇಡವೇ ? ''

ಬಳವಂತರಾಯನ ವಿಚಾರಗಳು ಎಲ್ಲರಿಗೂ ಸಯುಕ್ತಿಕವಾಗಿ ತೋರಿದವು. ಕಮಲಾದೇವಿಯಂತೂ ಅವನ ವಿಶಾಲವಾದ ಮನಸ್ಸನ್ನೂ ಪ್ರಗಲ್ಭವಾದ ವಿಚಾರಗಳನ್ನೂ ನೋಡಿ ಮನಸ್ಸಿನಲ್ಲಿಯೇ ಅವನಿಗೆ ಧನ್ಯವಾದಗಳನ್ನು ಸಮರ್ಪಿಸುತ್ತ ಅವನ ಅರಳಿದ ಮುಖವನ್ನೇ ನೋಡುತ್ತ ಕೂತಿದ್ದಳು. ಬಳವಂತನು ಅವಳ ಕಡೆಗೆ ನೋಡಿದ ಕೂಡಲೆ ಆಕೆ ಲಜ್ಜೆಯಿಂದ ನೆಲದ ಕಡೆಗೆ ದೃಷ್ಟಿಯನ್ನು ತಿರುಗಿಸುತ್ತಿದ್ದಳು. ಈ ಸಂಗತಿಯು ಆಕೆಯ ಅಣ್ಣನಾದ ವಿನಾಯಕರಾಯನ ಮನಸ್ಸಿಗೂ ರಾಮರಾಯನ ಮನಸ್ಸಿಗೂ ಆಗಲೇ ಹೊಳೆದಿದ್ದಿತು.

ಮುಂದೆ ಆ ಮಾತು ಈ ಮಾತು ನಡೆದು ಮತ್ತೊಂದು ವಾದದ ವಿಷಯವು ತಲೆದೋರಿತು. ಹಿಂದೂ ಸಮಾಜದೊಳಗಿನ ಅಸ್ಪೃಶ್ಯತೆಯೇ ಆ ವಿಷಯ. ಶಂಕರರಾಯರು ಅಸ್ಪೃಶ್ಯತೆಯು ಅನಿಷ್ಟವೆಂದು ಒಪ್ಪಿದಾಗ್ಯೂ ಹಿಂದಕ್ಕೆ ಅದು ಯಾಕೆ ಹುಟ್ಟಿತೆಂಬದರ ಕಾರಣಗಳನ್ನೂ ಇನ್ನು ಮುಂದಾದರೂ ಅದನ್ನು ಪೂರಾ ಹೊಗಲಾಡಿಸುವದು ಅಸಾಧ್ಯವೆಂಬ ತಮ್ಮ ಮತವನ್ನೂ ಪ್ರತಿಪಾದಿಸಿದರು. ಅವರು ಅಂದದ್ದು—

'' ಹಿಂದಕ್ಕೆ ಮಹಾಪಾತಕಗಳನ್ನು ಮಾಡಿದವರೂ ಸಮಾಜದ ವಿರುದ್ಧವಾಗಿ ಮಹಾದ್ರೋಹವನ್ನು ಮಾಡಿದವರೂ ಧರ್ಮಬಾಹಿರರಾಗಿ ಚಾಂಡಾಲರೆಂದೆನಿಸಿಕೊಂಡು ಊರ ಹೊರಗೆ ಇರುತ್ತಿದ್ದರು. ಇವರೇ ಅಸ್ಪೃಶ್ಯರು. ಮುಂದೆ ಇವರು ಉದಾರ ನಿರ್ವಾಹಕ್ಕಾಗಿ ಅನ್ಯ ವರ್ಣದವರು ಮಾಡಲಿಕ್ಕೆ ಹೇಸುವಂಥ ಕರ್ಮಗಳನ್ನು ಮಾಡಲಿಕ್ಕೆ ಹತ್ತಿದರು. ಈ ಪ್ರಕಾರ ಅವರ ಅಸ್ಪೃಶ್ಯತೆಯು ಸ್ಥಿರಮೂಲವಾಯಿತು.''

ಬಳವಂತರಾಯನು— '' ಅಸ್ಪೃಶ್ಯತೆಯ ಉತ್ಪತ್ತಿಯ ವಿಮಾಮಾಂಸೆಯು

ನೀವು ಹೇಳಿದಂತೆಯೇ ಇರಬಹುದು. ಆದರೆ ಚಾಂಡಾಲರೆಂದು ನೀವು ಈಗ ಯಾರಿಗೆ ಅನ್ನುವಿರಿ?''

ಶಂಕರರಾಯ- "ಹೊಲೆಯರು, ಮಾದಿಗರು ಮೊದಲಾದ ಅಸ್ಪೃಶ್ಯ ಜಾತಿಯವರೆಲ್ಲ ಚಾಂಡಾಲರೇ. ಅವರ ಪೂರ್ವಜರು ಹಿಂದೆ ಮಾಡಿದ ಪಾಪಗಳೇ ಅವರನ್ನು ಅಸ್ಪೃಶ್ಯರನ್ನಾಗಿ ಮಾಡಿವೆ.''

ಬಳವಂತರಾಯ- "ಒಬ್ಬ ಮನುಷ್ಯನು ಒಂದು ಮಹಾಪಾತಕವನ್ನು ಮಾಡಿದನೆಂಬ ಕಾರಣದಿಂದ ಅವನನ್ನು ಧರ್ಮದಿಂದಲೇ ಹೊರಗೆ ಹಾಕಿದ್ದರೆ ಅದು ನಮ್ಮ ಪೂರ್ವಜರು ಮಾಡಿದ ಒಂದು ಪ್ರಮಾದವೆಂದೇ ನಾನು ಹೇಳಬಲ್ಲೆನು. ಪಾಪಕ್ಕೆ ಪ್ರಾಯಶ್ಚಿತ್ತವಿರಬಹುದು. ಆದರೆ ಧರ್ಮದಿಂದಲೇ ಹೊರಗೆ ಹಾಕುವದೆಂದರೆ ದೇಹಾಂತ ಪ್ರಾಯಶ್ಚಿತ್ತ ಕೊಟ್ಟಂತೆಯೇ ಸರಿ. ಒಬ್ಬ ಮನುಷ್ಯನಿಗೆ ದೇಹಾಂತ ಶಿಕ್ಷೆಯನ್ನು ಕೊಡುವದು ಹೇಗೆ ಸಮಾಜದ ದೌರ್ಬಲ್ಯವನ್ನೂ ಅಪೂರ್ಣಾವಸ್ಥೆಯನ್ನೂ ತೋರಿಸುವದೋ, ಆದರಂತೆಯೇ ಒಬ್ಬ ಪಾಪಿಯನ್ನು ಧರ್ಮದಿಂದಲೇ ಹೊರಗೆ ಹಾಕಿದರೆ, ಅದು ನಮ್ಮ ಧರ್ಮಕ್ಕೆ ಒಂದು ದೊಡ್ಡ ಕುಂದು, ಒಂದು ದುರ್ದಶೆಯ ಚಿಹ್ನವೆಂತಲೇ ನಾನು ತಿಳಿಯುತ್ತೇನೆ. ಪಾಪಿಗೆ ಪ್ರಾಯಶ್ಚಿತ್ತವೆಂದು ಕೆಲಕೆಲವು ಸಮಾಜಿಕ ಬಾಧ್ಯತೆಗಳನ್ನೂ ಸೌಕರ್ಯಗಳನ್ನೂ ಅವನಿಂದ ಕಸಿದುಕೊಳ್ಳಬಹುದು. ಆದರೆ ಅವನಿಗೆ ಅನ್ನ ನೀರುಗಳು ಸಿಗದಂತೆ ಮಾಡುವದು ಹೇಗೆ ಅಕ್ಷಮ್ಯವೋ ಹಾಗೆಯೇ ಧರ್ಮದ ಪಾವನವಾದ ಆಶ್ರಯವೇ ಅವನಿಗೆ ಸಿಗದಂತೆ ಅವನನ್ನು ಧರ್ಮದಿಂದ ಹೊರಗೆ ಹಾಕಿದರೆ ಅದು ಆ ಧರ್ಮದ ದೌರ್ಬಲ್ಯವೇ ಸರಿ.''

ಕೇಶವರಾಯನು- "ಹೊಲೆಯ, ಮಾದಿಗ, ಮೊದಲಾದ ಅಸ್ಪೃಶ್ಯರನ್ನು ಯಾರೇನೂ ಹಿಂದೂ ಧರ್ಮದಿಂದ ಹೊರಗೆ ಹಾಕಿಲ್ಲ. ಅವರ ಹೊಲಸು ಬಾಳುವೆಗಾಗಿ ನಾವು ಅವರನ್ನು ಮುಟ್ಟುವದಿಲ್ಲ-ಅಷ್ಟೆ.''

ಬಳವಂತರಾಯ- "ಅವರು ಹೊಲಸಿನ ಉದ್ಯೋಗಗಳನ್ನು ಮಾಡುತ್ತಾರೆ-ಅವರ ಮೈಯೂ ಬಟ್ಟೆಬರೆಗಳೂ ಕೊಳೆಯಾಗಿವೆ ಎಂದು ಅವರ ಸ್ಪರ್ಶವನ್ನಷ್ಟೇ ಬಿಟ್ಟಿದ್ದರೆ ಅದು ಬೇರೆ ಮಾತು ಆಗುತ್ತಿತ್ತು. ಆದರೆ ನಾವು ಈಗ

ಅವರನ್ನು ಕಾರ್ಯತಃ ಧರ್ಮಬಾಹಿರರನ್ನು ಮಾಡಿದ್ದೇವೆ. ಹಿಂದೂ ಧರ್ಮವು, ಅಂದರೆ ಅದರ ಉಪದೇಶಕರು ಅವರ ಸಲುವಾಗಿ ಏನು ಮಾಡುತ್ತಾರೆಂಬುದನ್ನು ನನಗೆ ಸ್ವಲ್ಪ ಹೇಳಿರಿ. ಅಸ್ಪೃಶ್ಯರಿಗಾಗಿ-ಸಧ್ಯದ ಹೆಸರಿನಿಂದಲೇ ಅವರನ್ನು ಕರೆಯೋಣ-ಈ ಹರಿಜನರಿಗಾಗಿ ಧರ್ಮಪೀಠದಲ್ಲಿ ಕುಳಿತವರು ಏನು ಮಾಡುತ್ತಾರೆ? ಅವರಿಗೆ ವೇದಾಧಿಕಾರವಿಲ್ಲ. ಹಾಗಾದರೆ ಯಾವ ಅಧಿಕಾರವಿದೆ? ಪುರಾಣೇತಿಹಾಸಗಳನ್ನು ಕೇಳುವ ಅಧಿಕಾರವಿದೆಯೋ? ಇದ್ದದ್ದಾದರೆ, ಯಾವ ಬ್ರಾಹ್ಮಣನು ಎಂದು ಅವರನ್ನು ಕೂಡಿಸಿಕೊಂಡು ದೂರದಿಂದಲೇ ಆಗಲಿ-ಪುರಾಣವನ್ನು ಹೇಳಿದ್ದಾನೆ? ಹರಿಕೀರ್ತನವನ್ನು ಮಾಡಿದ್ದಾನೆ? ಅಥವಾ ಅವರಿಗೆ ತಿಳಿಯುವಂತೆ ಹಿಂದೂ ಧರ್ಮದ ತತ್ವಗಳನ್ನು ಅವರಿಗೆ ತಿಳಿಸಿ ಹೇಳಿದ್ದಾನೆ? ಅವರಿಗೆ ಧರ್ಮಸಂಸ್ಕಾರಗಳನ್ನು ಮಾಡಿಸಿದ್ದಾನೆ? ಧರ್ಮಶ್ರವಣ, ಸಂಸ್ಕಾರ, ಒತ್ತಟ್ಟಿಗಿರಲಿ; ನಮ್ಮ ಸಾರ್ವಜನಿಕ ದೇವರ ಗುಡಿಗಳಲ್ಲಿ ಹೋಗಿ ದೇವರ ದರ್ಶನವನ್ನು ತೆಗೆದುಕೊಳ್ಳಲಿಕ್ಕೂ ದೇವರ ಪೂಜೆಯನ್ನು ಮಾಡಿಸಲಿಕ್ಕೂ ಅವರಿಗೆ ಅಧಿಕಾರವಿದೆಯೋ? ಅವರಿಗೆ ಹಿಂದೂ ಧರ್ಮದ ನೆರಳೇ ಇಲ್ಲದಿದ್ದ ಮೇಲೆ ಅವರು ಸಹಜವಾಗಿ ಕ್ರೈಸ್ತ ಧರ್ಮಕ್ಕಾಗಲಿ ಮುಸಲ್ಮಾನ ಧರ್ಮಕ್ಕಾಗಲಿ ಸೇರಿಕೊಂಡರೆ ಅವರದೇನು ತಪ್ಪು? ಅದು ನಮ್ಮ ಹಿಂದೂಸಮಾಜಕ್ಕೂ ಧರ್ಮಪೀಠಕ್ಕೂ ನಮ್ಮ ತಪ್ಪೋ?"

ಅಪ್ಪಾಸಾಹೇಬ—"ಅವರು ಕ್ರೈಸ್ತ ಧರ್ಮವನ್ನಾಗಲಿ, ಮುಸಲ್ಮಾನೀ ಧರ್ಮವನ್ನಾಗಲಿ ಸೇರಿಕೊಂಡು ಕೋಟು ಚಣ್ಣಗಳನ್ನು ಹಾಕಿಕೊಂಡ ಕೂಡಲೇ, ನಾವು ಹಿಂದುಗಳು ಅವರನ್ನು ಬೇಕಾದ ಹಾಗೆ ಮುಟ್ಟಿ ಅವರ ಕೂಡ ಬಳಿಕೆ ಮಾಡುತ್ತೇವೆ. ಇದನ್ನು ನಾನು ಕಣ್ಮುಟ್ಟ ನೋಡಿದ್ದೇನೆ."

ರಾಮರಾಯ—"ಆದರೆ ಅವರು ಕ್ರೈಸ್ತರಾದ ಕೂಡಲೆ ಸ್ವಚ್ಛತೆಯನ್ನು ಕಲಿತುಕೊಂಡು ಬಿಳಿ ಛಾಯೆಯ ಅಂಗಿಗಳನ್ನು ಹಾಕಿಕೊಳ್ಳುತ್ತಾರೆ. ಆದ್ದರಿಂದಲೇ ಜನರು ಅವರನ್ನು ಮುಟ್ಟಲಿಕ್ಕೆ ಹಿಂದು ಮುಂದೆ ನೋಡುವದಿಲ್ಲ."

ಬಳವಂತರಾಯನು—"ಇದು ನೋಡಿರಿ ಆಶ್ಚರ್ಯವನ್ನು! ಅವರು ಕ್ರೈಸ್ತರಾದಕೂಡಲೆ ಸ್ವಚ್ಛರಾಗುತ್ತಾರಂತೆ. ಅಂದರೆ ಕ್ರೈಸ್ತಧರ್ಮವು ಅವ

ರಿಗೆ ಇಷ್ಟು ಬೇಗನೇ ಸ್ವಚ್ಛತೆಯನ್ನು ಕಲಿಸಲಿಕ್ಕೆ ಸಮರ್ಥವಾಗುತ್ತದಲ್ಲವೇ? ಅದೇ ಪ್ರಕಾರ ಸ್ವಚ್ಛತೆಯನ್ನು ಕಲಿಸುವದು ಹಿಂದೂ ಧರ್ಮ-ಸಮಾಜಕ್ಕೆ ಅಸಾಧ್ಯವಾದ ಮಾತೇನು? ಅಸಾಧ್ಯವೆಂದು ಒಪ್ಪಿದರೆ ಅದು ಹಿಂದೂ ಧರ್ಮದ-ಸಧ್ಯದ ಹಿಂದೂ ಧರ್ಮದ-ದೌರ್ಬಲ್ಯವನ್ನು ಸೂಚಿಸುವದಿಲ್ಲವೇ?''

ಕೇಶವರಾಯ– ''ಅಸ್ಪೃಶ್ಯರು ಕ್ರೈಸ್ತರಾದ ಕೂಡಲೆ ಅವರು ತಮ್ಮ ಪೂರ್ವದ ಹೊಲಸಿನ ಉದ್ಯೋಗಗಳನ್ನು–ಸತ್ತ ದನಗಳ ಚರ್ಮ ಸುಲಿಯುವದು, ಅವುಗಳ ಮಾಂಸ ತಿನ್ನುವದು, ತೊಗಲಿನ ಕೆಲಸ ಮಾಡುವದು–ಮುಂತಾದವುಗಳನ್ನು ಬಿಟ್ಟುಕೊಟ್ಟು ಬೇರೆ ಸ್ವಚ್ಛವಾದ ವ್ಯವಸಾಯುಗಳನ್ನು ಕೈಕೊಳ್ಳುತ್ತಾರೆ. ಅಂತೆಯೇ ಅವರ ಉಡುವು ವೇಷಗಳು ಸ್ವಚ್ಛವಾಗುತ್ತವೆ. ಇದರಲ್ಲಿ ಕ್ರಿಸ್ತಿಧರ್ಮದ ಪ್ರಾಶಸ್ತ್ಯವೇನು?''

ಶಂಕರರಾಯ– ''ಅಸ್ಪೃಶ್ಯರು ಹೊಲಸು ಕೆಲಸಬೊಗಸೆಗಳನ್ನು ಬಿಟ್ಟ ಮೇಲೆ ನಿರ್ಮಲರಾಗಿ ನಮ್ಮ ಸ್ಪರ್ಶಕ್ಕೆ ಅರ್ಹರಾಗಬಹುದು. ಆದರೆ ಅವರು ಈ ಕೆಲಸಗಳನ್ನು ಬಿಟ್ಟರೆ ಅವುಗಳನ್ನು ಮಾಡುವವರಾರು? ಬೇರೆ ವರ್ಣದವರು ಈ ಕೆಲಸಗಳನ್ನು ಕೈಕೊಂಡರೆ ಆ ಮೇಲೆ ಅವರು ಅಸ್ಪೃಶ್ಯರಾಗುವರು. ಅಂತೂ ಬಿಟ್ಟಿನಮೇಲೆ ಅಸ್ಪೃಶ್ಯತೆಯು ಉಳಿದೇ ಉಳಿಯುವದು.''

ಕಮಲಾದೇವಿ–''ಹೊಲಸು ಕೆಲಸಬೊಗಸೆಗಳನ್ನು ಮಾಡಿದಾಕ್ಷಣಕ್ಕೆ ಅವರು ಅಸ್ಪೃಶ್ಯರಾದರೆ ನಾವು ಹೆಂಗಸರೂ ಅಸ್ಪೃಶ್ಯರಾಗಬೇಕು. ಯಾಕಂದರೆ ಸಣ್ಣ ಮಕ್ಕಳ ಹೊಲಸನ್ನು ತೆಗೆಯುವವರು ನಾವು. ಬೇನೆ ಬಂದಾಗ ದೊಡ್ಡವರ ಹೊಲಸು ತೆಗೆಯುವ ಭಾಗ್ಯವು ಸಹ ನಮ್ಮದೇ. ಅಂದ ಮೇಲೆ ನಾವೂ ಅಸ್ಪೃಶ್ಯರೆಂದು ಏಕೆ ತಿಳಿಯಲ್ಪಡಬಾರದು?''

ಅಪ್ಪಾಸಾಹೇಬ– ''ಹೊಲಸಿನ ಕೆಲಸಗಳನ್ನು ಮಾಡಿದಾಕ್ಷಣಕ್ಕೆ ಯಾವನೂ ಅಸ್ಪೃಶ್ಯನಾಗಲಾರನು. ಪಶ್ಚಿಮದಲ್ಲಿ ಹೊಲಸಿನಲ್ಲಿ ಕೆಲಸ ಮಾಡುವವರಿಲ್ಲವೇ? ಅವರು ತಮ್ಮ ಕೆಲಸವಾದ ಕೂಡಲೆ ತಮ್ಮ ಉಡುಪನ್ನು ಬದಲಿಸಿ ಬೇರೆ ಸ್ವಚ್ಛವಾದ ಉಡುಪನ್ನು ಧರಿಸಿ ಗಾಡಿ–ಬಸ್ಸು–ಟ್ರಾಮು ಗಳಲ್ಲಿ ಎಲ್ಲ ಜನರ ಕೂಡ ಕೂತುಕೊಂಡು ಆಡ್ಡಾಡುವರು. ಅವರು ಇಂಥ

ಕೆಲಸ ಮಾಡುವವರೆಂಬ ಸಂಶಯವು ಸಹ ಉಳಿದವರಿಗೆ ಬರುವದಿಲ್ಲ. ಇದನ್ನು ನೀವು ಓದಿಲ್ಲವೇ? ಕೇಳಿಲ್ಲವೇ?''

ಬಳವಂತರಾಯ–''ಅಪ್ಪಾಸಾಹೇಬ, ನೀವು ಒಳ್ಳೇ ಮಹತ್ವದ ಅಂಶವನ್ನು ಬೈಲಿಗೆ ಹಾಕಿದಿರಿ. ಸಮಾಜ ಹಿತಕ್ಕಾಗಿ ಹೊಲಸಿನಲ್ಲಿ ಯಾರಾದರೂ ಕೆಲಸ ಮಾಡಲಿಕ್ಕೇಬೇಕು. ಇಂಥವರೇ ಹೊಲಸಿನ ಕೆಲಸವನ್ನು ಮಾಡಬೇಕೆಂದು ಸಮಾಜವು ವಿಧಿಸುವ ಕಾರಣವಿಲ್ಲ. 'Heredity'–ಅಥವಾ ಪರಂಪರಾ ಧರ್ಮದ ಪ್ರಕಾರ ಅಥವಾ ಮಹತ್ವದ ಕೆಲಸಗಳೂ ಸಿಗದ ಪಕ್ಷಕ್ಕೆ, ಯಾರಾದರೂ ಆ ಕೆಲಸಗಳನ್ನು ಮಾಡೇ ಮಾಡುವರು. ಹೇಸಿಗೆಯ ಕೆಲಸಗಳನ್ನು ಮಾಡುವವನು ಆ ಕೆಲಸಗಳನ್ನು ಮಾಡುವಾಗ, ಅಸ್ಪೃಶ್ಯನಾಗಬಹುದು; ಇನ್ನುಳಿದ ವೇಳೆಯಲ್ಲಿಯೂ ಅವನ ಮೈಬಟ್ಟೆಗಳು ಹೊಲಸಾಗಿ ಉಳಿದರೆ ಯಾರೂ ಅವನನ್ನು ಮುಟ್ಟಲಿಕ್ಕೆ ಒತ್ತಾಯ ಮಾಡಲಾರರು. ಆದರೆ ಅವನು ಸ್ನಾನ ಮಾಡಿ ಸ್ವಚ್ಛವಾದ ಬಟ್ಟೆಬರೆಗಳನ್ನು ಹಾಕಿಕೊಂಡು ಬಂದರೆ, ನಾವು ಅವನನ್ನೇಕೆ ಮುಟ್ಟಿಸಿಕೊಳ್ಳಬಾರದು? ಉಳಿದ ವರ್ಣದವರ ಸಂಗಡ ಬಳಿಕೆ ಮಾಡುವಂತೆ ಅವನ ಸಂಗಡಲೂ ಯಾಕೆ ಮಾಡಬಾರದು?''

ಕೇಶವರಾವ–''ಅಸ್ಪೃಶ್ಯರನ್ನು ಮುಟ್ಟಿದ ಮೇಲೆ ಅವರ ಸಂಗಡ ಸಹ ಭೋಜನ, ಶರೀರ ಸಂಬಂಧ, ಇವುಗಳನ್ನು ಯಾಕೆ ಮಾಡಬಾರದು? ಇಷ್ಟಾದ ಮೇಲೆ ಹಿಂದೂ ಧರ್ಮವೆಲ್ಲಿ ಉಳಿಯಿತು?'' ಎಂದು ಸ್ವಲ್ಪ ಬೇಜಾರಾದ ದನಿಯಿಂದ ನುಡಿದನು.

ಬಳವಂತರಾವ–''ಯಾರ ಮೈಯನ್ನೂ ಬಟ್ಟೆಗಳನ್ನೂ ಕಂಡರೆ ನಮಗೆ ಹೇಸಿಗೆ ಬರುವದಿಲ್ಲವೋ ಅವರನ್ನು ಮುಟ್ಟಲಿಕ್ಕೆ ಅಡ್ಡಿಯಿಲ್ಲ. ಇನ್ನು ಅವರ ಸಂಗಡ ಊಟ ಉಡಿಗೆಗಳನ್ನು ಮಾಡಬೇಕಾದರೆ, ಅವರು ನಮ್ಮಷ್ಟೇ ದೇಹದಿಂದಲೂ ವೇಷದಿಂದಲೂ ಸ್ವಚ್ಛರಾಗಿರುವದಲ್ಲದೆ ಅವನ ಮನಸ್ಸೂ ನಮ್ಮಷ್ಟೇ ಸುಸಂಸ್ಕೃತವಾಗಿರಬೇಕು. ನಮಗೂ ಅವರಿಗೂ ವಿಚಾರವಿನಿಮಯವಾಗುವದಕ್ಕೆ ಅವಕಾಶವಿರಬೇಕು. ಇಲ್ಲದಿದ್ದರೆ ಸಹ ಭೋಜನಕ್ಕೆ ನಮ್ಮ ಬಾಳುವೆಯಲ್ಲಿ ಪ್ರಸಂಗವೇ ಬರುವದಿಲ್ಲ. ಇನ್ನು ಶರೀರ ಸಂಬಂಧವಾಗಬೇಕಾದರೆ ಎರಡೂ ಮನೆತನಗಳ ಸಂಸ್ಕೃತಿಯು-ಆಚಾರ ವಿಚಾರ ಸಂಪ್ರದಾ

ಯುಗಳು—ಸಮಾನವಾಗಿರಲಿಕ್ಕೆಬೇಕು. ಸಹಭೋಜನ, ಶರೀರ ಸಂಬಂಧ— ಇವು ನಾವು ಆರಿಸಿಕೊಂಡ ಸ್ಥಳದಲ್ಲಿಯೇ ಆಗುವವು. ಮೈಯಿಂದಲೂ ಬಟ್ಟೆಬರೆಗಳಿಂದಲೂ ನಿರ್ಮಲನಾದ ಯಾವ ಮನುಷ್ಯಪ್ರಾಣಿಯನ್ನು ಮುಟ್ಟಲಿಕ್ಕೆ ನಾವು ಒಲ್ಲೆನ್ನಬಾರದು. ಒಂದು ವೇಳೆ ಅಂದರೆ ಅದು ಮಹಾ ಪಾಪಗಳಿಗಿಂತ ಮಹತ್ತರವಾದ ಪಾಪವು."

ವಿನಾಯಕರಾಯ— "ಈ ಹರಿಜನರನ್ನು ಮುಟ್ಟಬಾರದೆಂದು ನಾನೆಂದಿಗೂ ಅನ್ನುವವನಲ್ಲ. ಆದರೆ ಅವರು ಸ್ವಚ್ಛತೆಯನ್ನು ಕಲಿತಕೊಳ್ಳ ಬೇಕು. ಹಸನಾದ ಉಡಿಗೆತೊಡಿಗೆಗಳನ್ನು ಹಾಕಿಕೊಳ್ಳಬೇಕು. ವಿದ್ಯೆ ಕಲಿ ಯಬೇಕು. ಹೀಗೆ ಎಲ್ಲ ರೀತಿಯಿಂದ ಸುಧಾರಿಸುತ್ತ ಹೋದರೆ ನಾವು ಅವರ ಸಂಗಡ ಬಳಿಕೆ ಮಾಡಬಹುದು. ಆದರೆ ಸುಧಾರಿಸುವ ಪ್ರಯತ್ನ ಮಾಡುವದನ್ನು ಬಿಟ್ಟು ಅವರೂ ಇನ್ನುಳಿದ ಬ್ರಾಹ್ಮಣೇತರರೂ ಬ್ರಾಹ್ಮ ಣರಿಗೆ ಸಿಕ್ಕ ಹಾಗೆ ಬೈಯ್ಯುವದು, ಅವರ ಮೇಲೆ ದ್ವೇಷಮಾಡುವದು, ಮಾಡುತ್ತಾರಲ್ಲ! ಅವರಿಗೆ ಏನನ್ನಬೇಕು?"

ಬಳವಂತರಾಯ— "ಧರ್ಮ, ಧರ್ಮ ಎಂದು ಬೊಬ್ಬೆಕುಟ್ಟುವ ಬ್ರಾಹ್ಮಣರು ಹರಿಜನರು ತಮ್ಮಷ್ಟಕ್ಕೆ ತಾವೇ ಕಲಿತು ಸುಧಾರಿಸಲೆಂದು ಹಾದೀ ನೋಡುತ್ತಕೂಡ್ರದೆ ತಾವೇ ಮುಂದೆ ಮುಂದೆ ಹೋಗಿ ಅವರಿಗೆ ಧರ್ಮದ ತಿರುಳನ್ನು ತಿಳಿಯುವಂತೆ ಹೇಳಬೇಕು. ಹಿಂದೂ ಧರ್ಮ ದಲ್ಲಿ ಅತಿ ಶ್ರೇಷ್ಠವಾದ ಧರ್ಮತತ್ವಗಳಿದ್ದರೆ, ಅತ್ಯುಚ್ಚವಾದನೀತಿ ಸಮಾನಳಿ ಗಳಿದ್ದರೆ, ಪಾಮರರನ್ನು ಪಾವನಗೊಳಿಸಿ ಸನ್ಮಾರ್ಗಕ್ಕೆ ಹಚ್ಚುವ ಶಕ್ತಿಯು ಅದರಲ್ಲಿದ್ದರೆ— ಅದರಲ್ಲಿ ಅಂಥ ಶಕ್ತಿಯಿದ್ದ ಬಗ್ಗೆ ನನಗೇನೂ ಸಂಶಯವಿಲ್ಲ— ಆ ಧರ್ಮದ ಪಾವನವಾದ ನೀರನ್ನು ಹರಿಜನರಿಗೂ ಉಳಿದ ವರ್ಣದವರಿಗೂ ಮನದಣಿ ಹಣಿಸಬೇಕು. ಹರಿಜನರಲ್ಲಿಯೂ ವೇದೋಪನಿಷತ್ತುಗಳು ವರ್ಣನೆಮಾಡಿದ ಆತ್ಮನು ಇದ್ದದ್ದಾದರೆ, ಆ ಮಾಯೆ ಯಿಂದ ಮುಸುಕಿದ ಆತ್ಮನನ್ನು ಜಾಗ್ರುತಮಾಡುವ ಶ್ರೇಯಸ್ಸನ್ನು ಬ್ರಾಹ್ಮ ಣರು ಪಡೆಯಬೇಕು. ಪಾಮರರಿಗೆ ಹೇಳಲಿಕ್ಕೆ ಬೇಕಾದಷ್ಟು ಕಥೆಗಳಿವೆ; ಚರಿತ್ರೆಗಳಿವೆ; ಇತಿಹಾಸಗಳಿವೆ. ಕಥಾಶ್ರವಣದಿಂದಲೂ, ಹರಿಕೀರ್ತನೆಗ ಳಿಂದಲೂ ಸಾರ್ವಜನಿಕ ಪೂಜಾಪ್ರಾರ್ಥನೆಗಳಿಂದಲೂ, ಅವರಿಗೆ ಹಿಂದೂ

ಧರ್ಮದ ಅಮೃತಾನ್ನವನ್ನು ಉಣಬಡಿಸಿದರೆ, ಅವರಿಗೆ "ನಾವೂ ಹಿಂದೂಗಳು; ನಮಗೂ ಒಂದು ಧರ್ಮವಿದೆ; ಬ್ರಾಹ್ಮಣರೂ ನಾವೂ ಒಂದೇ ಧರ್ಮದವರು" ಎಂಬ ಭಾವನೆಯು ದೃಢವಾಗಿ, ಜಾತಿಜಾತಿಗಳಲ್ಲಿ ವೈಮನಸ್ಸವು ಅಡಗುವದು; ಪ್ರೀತಿಯ ಕಟ್ಟು ಎಲ್ಲರನ್ನೂ ಒಳಗೊಂಡು ಸ್ಥಿರವಾದ ಒಕ್ಕಟ್ಟು ತಲೆದೋರುವದು."

ಇಷ್ಟಾದ ಮೇಲೆ ಕೇಶವರಾಯನೂ ಶಂಕರರಾಯನೂ ನಿರುತ್ತರರಾದರು. ಎಲ್ಲರ ಮನಸ್ಸುಗಳಲ್ಲಿಯೂ ಬಳವಂತರಾಯನ ವಿಚಾರಗಳ ಸತ್ಯತೆಯು ಅತಿ ಬಲುಮೆಯಿಂದ ಹೊಳೆಯಹತ್ತಿತು. ಕಮಲಾದೇವಿಯಂತೂ ಪರಸ್ಪರ ವಿಚಾರಗಳ, ಭಾವನೆಗಳ, ಏಕರೂಪತೆಯಿಂದ ತನ್ನ ಹೃದಯದಲ್ಲಿ ಹಿಡಿಸಲಾರದ ಆನಂದವನ್ನು ಹೊಂದಿ ಅದನ್ನು ತನ್ನ ಅರಳಿದ ಮೊಗದಿಂದಲೂ ಮುಗುಳುನಗೆಯಿಂದಲೂ ಹೊರಗೆಡವುತ್ತ ಅದೇನೋ ಮನೋರಾಜ್ಯದಲ್ಲಿ ಕುಳಿತಿದ್ದಳು.

ಅತಿಥಿಗಳು ತಮ್ಮ ಮನೆಗೆ ಹೋಗಲಿಕ್ಕೆ ಎದ್ದರು. ಆದರೆ ಕೇಶವರಾಯನ ಆಗ್ರಹದ ಮೂಲಕ ಮತ್ತೆ ಚಹಾಪಾನವಾಗುವವರೆಗೆ ತಡೆದರು. ಈ ಅವಧಿಯಲ್ಲಿ, ನಮ್ಮ ಯಾತ್ರಿಕ ಮಂಡಲಿಯು ಎಂದು ಹೊರಡುವದು ? ಯಾವ ಯಾವ ಊರುಗಳಿಗೆ ಹೋಗುವದು ? ತಿರುಗಿ ಬರುವದಕ್ಕೆ ಎಷ್ಟು ದಿವಸ ಬೇಕಾದೀತು ? ಎಂಬ ಬಗ್ಗೆ ಮಾತುಕಥೆಗಳಾದವು. ಕಮಲಾದೇವಿಯು ಈ ಯಾತ್ರಿಕರ ಕಾರ್ಯಕ್ರಮವನ್ನು ಕಿವಿಗೊಟ್ಟು ಕೇಳುತ್ತಿದ್ದಳು.

ಶಂಕರರಾಯರೂ ವಿನಾಯಕರಾಯನೂ ಕೇಶವರಾಯರಿಗೂ ಹೊಸ ಮಿತ್ರರಾದ ಬಳವಂತರಾವ ಮೊದಲಾದವರಿಗೂ ಹೇಳಿ ಮನೆಗೆ ಹೊರಟರು. ಗಿರಿಜಾಬಾಯಿಯವರು "ನಿಮ್ಮ ಯಾತ್ರೆಯು ಸುಖಕರವಾಗಲಿ" ಎಂದು ಹಾರೈಸಿ ರಾಧಾಬಾಯಿ ಮೊದಲಾದವರ ಅಪ್ಪಣೆ ತೆಗೆದುಕೊಂಡರು.

ಎಲ್ಲರೂ ಹೋದಮೇಲೆ ರಾಮರಾಯನು ಬಳವಂತರಾಯನ ಹತ್ತರ ಬಂದು– "ಯಾಕಪ್ಪಾ ಏನೋ ವಿಚಾರದಲ್ಲಿ ಮುಳುಗಿದಂತೆ ಕಾಣುತ್ತದಲ್ಲ ನಮಗೂ ಸ್ವಲ್ಪ ಹೇಳು. ನೋಡೋಣ" ಎಂದು ಕಿರುನಗೆಯನ್ನು ಸೂಸುತ್ತ ನುಡಿದನು.

ಬಳವಂತರಾಯನು– "ಛೇ. ವಿಚಾರವೆಲ್ಲಿಯದು ? ಉತ್ತರದ ಯಾತ್ರೆಗೆ ನಾಳೆ ಹೊರಡಬೇಕಲ್ಲ. ಅದೇ ವಿಚಾರವೇ ವಿಚಾರ" ಎಂದು ಹಾರಿಸಿ ಉತ್ತರ ಕೊಟ್ಟನು. ರಾಮರಾಯನು– "ಒಳ್ಳೇದು, ಒಳ್ಳೇದು, ಈಗ ಯಾಕೆ ಬೇಕು ?" ಎಂದನ್ನುತ್ತ ಒಳಗೆ ಹೋಗಿ ಊರಿಗೆ ಹೊರಡುವ ಸಿದ್ಧತೆಯನ್ನು ಮಾಡಲಿಕ್ಕೆ ಹತ್ತಿದನು.

---

೧೦

## ಧರ್ಮಸ್ಥೂಳರ ಸುಲಿಗೆಯು



ನಮ್ಮ ಯಾತ್ರಿಕ ಮಂಡಲಿಯು ಮರು ದಿವಸ ಮುಂಜಾನೆ ಪುಣೆಯಿಂದ ಹೊರಟರು. ರೈಲುಗಾಡಿಯಲ್ಲಿ ಜನರ ಸಂದಣಿಯಿಂದ ಪ್ರವಾಸಿಕರಿಗೆ ಬಹಳ ತ್ರಾಸವಾಗುತ್ತಿತ್ತು. ಇದಲ್ಲದೆ ಮೂರನೇ ವರ್ಗದ ಡಬ್ಬಿಗಳಲ್ಲಿ ಕೂತು ಹಗಲೂ ರಾತ್ರಿ ಪ್ರವಾಸ ಮಾಡುವದೆಂದರೆ ನರಕವಾಸವನ್ನು ಈ ಜಗತ್ತಿನಲ್ಲಿ ಅನುಭವಿಸಿದಂತೆಯೇ ಸರಿ. ಮೂರನೇ ವರ್ಗದ ಪ್ರವಾಸಿಕರಿಂದ ರೈಲು ಕಂಪನಿಗಳ ಉತ್ಪನ್ನದ ಬಹ್ವಂಶವು ಹೊರಡುತ್ತಿದ್ದರೂ ಅವರ ಸುಖಸೌಕರ್ಯಗಳ ಕಡೆಗೆ ತೋರಿಸುವ ಅಧಿಕಾರಿಗಳ ದುರ್ಲಕ್ಷ್ಯವು ಹಳೆಯ ಮಾತಾಗದೆ. ಹದಿನಾರು ಜನರು ಕೂಡ್ರುವಲ್ಲಿ ಮೂವತ್ತೆರಡು ಜನರು ಸುಖವಾಗಿ ಕೂಡ್ರಬಹುದು. ಜಂಕ್ಶನ್ ಬಂದಾಗಲೇ ಡಬ್ಬಿಗಳನ್ನು ಸ್ವಚ್ಛ ಮಾಡುವರು. ಇಷ್ಟಾದರೂ ಡಬ್ಬಿಗಳು ಹೇಸಿಕೆಯು ಆಗರವಾದರೆ ಅದರ ದೋಷವು ಪೂರಾ ರೈಲಿನ ಅಧಿಕಾರಿಗಳ ಮೇಲೆಯೇ ಹೊರಲಾರದು. ನಮ್ಮ ಜನರ ಕಡೆಗೆ ಈ ದೋಷದ ದೊಡ್ಡಪಾಲು ಸಲ್ಲುವದು. ಅವರು ರೈಲ ಡಬ್ಬಿಗಳನ್ನು ನಾನಾ ಪ್ರಕಾರವಾಗಿ ಹೊಲಸು ಮಾಡುವದನ್ನು ನೋಡಿದರೆ ಇವರಿಗೆ ಸ್ವಚ್ಛತೆಯೆಂದರೇನು ಗೊತ್ತೇ ಇಲ್ಲ ಎಂದು ಬೈಯ್ಯಬೇಕಾಗುತ್ತದೆ. ಸುಶಿಕ್ಷಿತರೆಂಬುವರು ಕೂಡ ಡಬ್ಬಿಗಳಲ್ಲಿಯೇ ಉಗುಳುವರು; ಬೀಡಿ ಸಿಗಾರೇಟುಗಳನ್ನು ಸೇದಿ ಅಲ್ಲಿಯೇ ಚಲ್ಲುವರು ಇತ್ಯಾದಿ ಇತ್ಯಾದಿ. ಬಳವಂತರಾಯ

ನಿಗೂ ಕೆಲವು ಪ್ರವಾಸಿಕರಿಗೂ ಈ ವಿಷಯವಾಗಿ ಘನಘೋರವಾದ ವಾಗ್ಯುದ್ಧವಾಯಿತು. ಇಬ್ಬರೂ ಸೋಲಲಿಲ್ಲ.

ಎರಡು ದಿವಸಗಳ ಪ್ರವಾಸದ ನಂತರ ನಮ್ಮ ಯಾತ್ರಿಕರು ಅಲಹಾಬಾದ ಸ್ಟೇಶನ್ನಿಗೆ ಸಂಜೆಯ ಆರು ಘಂಟೆಗೆ ಬಂದು ಮುಟ್ಟಿದರು. ರೈಲಿನಿಂದ ಇಳಿದ ಕೂಡಲೆ ಪಂಡಾ ಜನರ ಕಲಕಲವು ಆರಂಭವಾಯಿತು. ಪ್ರತಿಯೊಬ್ಬನು ತನ್ನಲ್ಲಿರುವ ಉದ್ದವಾದ ಹೊತ್ತಿಗೆಯನ್ನು ತೋರಿಸಿ “ ಇದು ನೋಡಿ ಎಲ್ಲ ಯಾತ್ರಿಕರು ನಮ್ಮಲ್ಲಿಯೇ ಬರುತ್ತಾರೆ. ನಿಮ್ಮ ತಂದೆಯ ಹೆಸರು ಮೊದಲು ಹೇಳಿ, ನನ್ನ ಹೊತ್ತಿಗೆಯಲ್ಲಿ ತೋರಿಸುತ್ತೇನೆ ” ಎಂದು ಅನ್ನುವನು. ಯಾತ್ರಿಕನು ಯಾವದೇ ಕಾರಣದಿಂದ ಅನುಮಾನಿಸಿದರೂ ಅವನನ್ನು ಬಿಡುವದಿಲ್ಲ. ಕಡೆಗೆ ಹೆಸರು ಹೇಳದಿದ್ದರೆ. ಅವನು ಸಿಟ್ಟಿಗೆದ್ದು “ ಯಾಕೆ ಇಷ್ಟು ಅನುಮಾನ? ನೀವು ಹೆಸರು ಹೇಳಲಿಕ್ಕೆ ನಾಚುವಷ್ಟು ನಿಮ್ಮ ಹಿರಿಯರು ಪಾಪಿಷ್ಠರಿರುವರೇ? ” ಎಂದು ಜನರಿಗೆ ಕೊಂಕು ಮಾತುಗಳನ್ನಾಡುವರು. ಧರ್ಮಮೂಢರಾದ ಯಾತ್ರಿಕರು ಸಿಕ್ಕ ಕೂಡಲೆ ಪಂಡಾ ಜನರಿಗೆ ಬಲು ಹಿಗ್ಗು. ಅವರನ್ನು ಕಾಡಿಕಾಡಿ ಏನಾದರೊಂದು ಹೇಳಿ ತಮ್ಮ ಮನೆಗೆ ಒಯ್ಯುವರು. ಅವರಿಂದ ಶ್ರಾದ್ಧ ಮೊದಲಾದ ಧರ್ಮಕರ್ಮಗಳ ನಿಮಿತ್ತದಿಂದ ಮಿತಿಮೀರಿ ದುಡ್ಡನ್ನು ಸುಲಿಯುವರು.

ನಮ್ಮ ಮಂಡಲಿಯು ರೈಲಿನಿಂದ ಇಳಿದು ಹೋಗುವಾಗ ಒಬ್ಬ ಪಂಡಾನು ಬಳವಂತರಾಯನ ಕೈಯೊಳಗಿನ ಹಾಸಿಗೆಯನ್ನು ಜಗ್ಗ ಹತ್ತಿದನು, ಮತ್ತೊಬ್ಬನು ರಾಮರಾಯನ ಕೈಯೊಳಗಿನ ಕೈ ಚೀಲವನ್ನು ಹಿಡಿದನು. ಬಳವಂತರಾಯನು ವಿನಯದಿಂದ “ ಸ್ವಾಮಿ, ನಾವು ನಿಮ್ಮಲ್ಲಿ ಬರುವದಿಲ್ಲ ನಮ್ಮ ಪರಿಚಯದವರು ಈ ಊರಲ್ಲಿದ್ದಾರೆ. ” ಎಂದು ಹೇಳಿದರೂ ಅವನ ಮಾತಿನ ಮೇಲೆ ವಿಶ್ವಾಸವಿಡದೆ ಹಾಗೇ ಬೆನ್ನು ಹತ್ತಿದರು. ರಾಮರಾಯನು ಒಂದು ಯುಕ್ತಿಯನ್ನು ತೆಗೆದನು. ಅವರಿಗೆ ಕೇಳುವಂತೆ “ ಪಂಡಾ ಜನರು ಬಹಳ ಬದಮಾಷ್ ಇರುತ್ತಾರೆ. ಅವರನ್ನು ಎಂದೂ ನಂಬಬಾರದು. ಹಿಂದಕೊಮ್ಮೆ ನಮ್ಮ ತಂದೆಯು ಬಂದಾಗ ಒಬ್ಬ ಪಂಡಾನು ಅವನಿಗೆ ಹೀಗೆ ಠಕ್ಕಿಸಿದನು ” ಎಂದು ಒಂದು ಕಥೆಯ ಗಂಟನ್ನೇ ಬಿಚ್ಚಿದನು. ಇದರಿಂದ

ಸ್ಟೇಶನ್ನಿನ ಹೊರಗೆ ಹೋಗುವಷ್ಟರಲ್ಲಿ ಒಬ್ಬ ಪರಿಡಾಸೂ ಅವರ ಬೆನ್ನು ಹಿಂದೆ ಇದ್ದಿಲ್ಲ; ಎಲ್ಲರೂ ಮಾಯವಾಗಿದ್ದರು.

ಅವರು ಎರಡು ರಥಗಳನ್ನು ಮಾಡಿಕೊಂಡು ಊರೊಳಗೆ ಶೇಟಜಿಯವರು ಪರಿಚಯಪತ್ರವನ್ನು ಕೊಟ್ಟ ವ್ಯಾಪಾರಸ್ಥನ ಮನೆಗೆ ಹೋದರು. ಶೇಟಜಿಯವರ ಪತ್ರ ನೋಡಿದ ಕೂಡಲೇ ಆ ವ್ಯಾಪಾರಿಯು ನಮ್ಮ ಮಂಡಲಿಗೆ ಇಳುಕೊಳ್ಳಲಿಕ್ಕೆ ಪ್ರತ್ಯೇಕ ಸ್ಥಳವನ್ನು ಮಾಡಿಕೊಟ್ಟು ಪಾತ್ರೆ-ಪಡಗಗಳು, ಸೀಧಾ ಸಾಮಗ್ರಿ, ದೀಪ ಮೊದಲಾದ ಎಲ್ಲ ಸಾಮಾನುಗಳನ್ನೂ ಒದಗಿಸಿ ಕೊಟ್ಟನು.

ಮರುದಿವಸ ಪ್ರಾತಃಕಾಲಕ್ಕೆ ಎದ್ದು ವ್ಯಾಪಾರಸ್ಥನು ಕೊಟ್ಟ ಒಬ್ಬ ಮನುಷ್ಯನನ್ನು ಕರೆದುಕೊಂಡು ನಮ್ಮ ಜನರು ಗಂಗಾ ದರ್ಶನಕ್ಕಾಗಿ ಹೊರಟರು. ಹಾಗೆಯೇ ಊರು ನೋಡುತ್ತ ನಡೆದರು. ಅಲಹಾಬಾದದ ಪೇಟೆಯು ಬಹಳ ದೊಡ್ಡದು. ದೊಡ್ಡ ದೊಡ್ಡ ಮನೆಗಳು ಮತ್ತು ಬೀದಿಗಳು. ಸಾಧ್ವೀ ಅಹಿಲ್ಯಾಬಾಯಿಯ ಘಾಟಕ್ಕೆ ಬರಲು ದಂಡೆಗುಂಟ ಉಸುಬಿನ ಬೈಲೂ ಸ್ವಚ್ಛವಾದ ಗಂಗಾಪ್ರವಾಹವೂ ದೂರದವರೆಗೆ ಕಾಣಿಸುತ್ತಿದ್ದುವು. ಮಾಘಮಾಸವಾಗಿದ್ದರಿಂದ ಬರ್ಫ ಕರಗಿ ನದಿಗೆ ಹೊಸ ನೀರು ಬರಲಿಕ್ಕೆ ಆರಂಭವಾಗಿತ್ತು.

ಗಂಗಾನದಿಯ ತಟಾಕವು ನೋಡುವವರ ಕಣ್ಣಿಗೆ ಬಹು ರಮ್ಯವಾಗಿ ಕಾಣುತ್ತಿದ್ದಿತು. ಕೆಲವರು ಗಂಗಾದೇವಿಯ ಪೂಜೆಯನ್ನು ಮಾಡುತ್ತಿದ್ದರು. ಕೆಲವರು ಸ್ನಾನಮಾಡುತ್ತಿದ್ದರು; ಬೇರೆ ಕೆಲವರು ಕ್ಷೌರ ಮಾಡಿಸಿಕೊಂಡು ಸ್ನಾನಸಂಕಲ್ಪವನ್ನು ಹೇಳಿಸಿಕೊಳ್ಳುತ್ತಿದ್ದರು. ಅಲ್ಲಲ್ಲಿ ಗಂಗಾಪುತ್ರರು-ಪಂಡಾಜನರು-ಯಾತ್ರಿಕರ ಕಡೆಯಿಂದ ಧರ್ಮಕೃತ್ಯ ಮಾಡಿಸುತ್ತ ಅವರ ಕಡೆಯಿಂದ ದುಡ್ಡು ಎತ್ತುತ್ತಿದ್ದರು. ಬೇರೆ ಕೆಲವರು ಕೇವಲ ಗಂಗೆಯ ಸೊಬಗನ್ನು ನೋಡುವದರಲ್ಲಿ ತಲ್ಲೀನರಾಗಿದ್ದರು. ನಾ ನಾ ದೇಶದ ಜನರು ನಾನಾಬಣ್ಣದ ಉಡಿಗೆತೊಡಿಗೆಗಳನ್ನು ಧರಿಸಿ ಅಲ್ಲಿ ನಿಂತಿರುವದರಿಂದ ಅದೊಂದು ನೋಡುವವರ ಕಣ್ಣಿಗೆ ಸೊಬಗಿನ ಹಬ್ಬವಾಗಿತ್ತು.

ಸಂಗಮದ ನೋಟವಂತೂ ಕವಿಹೃದಯದಲ್ಲಿ ಕವಿತಾಸ್ಫೂರ್ತಿಯನ್ನು ಹುಟ್ಟಿಸುತ್ತಿದ್ದಿತು. ಅಷ್ಟು ಸುಂದರವಾದ ದೃಶ್ಯವು ಜಗತ್ತಿನಲ್ಲಿ ಮತ್ತೆಲ್ಲಿಯೂ ಇರಲಿಕ್ಕಿಲ್ಲ. ಗಂಗಾ ಯಮುನಾ ಸರಸ್ವತಿ ನದಿಗಳ ಸಂಗಮವು ಮೂರು ಬೇರೆಬೇರೆ ಬಣ್ಣದ ಕೂದಲುಗಳನ್ನು ಕೂಡಿಸಿ ಹೆಣೆದ ಹೆಳಲಿನಂತೆ ಕಾಣುತ್ತಿರುವದರಿಂದ ಅದಕ್ಕೆ ತ್ರಿವೇಣಿಸಂಗಮವೆಂಬ ಸಾರ್ಥಕನಾಮವು.

ಗಂಗೆಯ ನೀರು ಬಿಳಿದು, ಯಮುನೆಯ ನೀರು ಕರಿದು, ಗುಪ್ತಗಾಮಿನಿಯಾದ ಸರಸ್ವತಿಯ ನೀರು ಕೆಂಪು, ಹೀಗೆ ಮೂರು ಬಣ್ಣದ ನೀರುಗಳು ಅಲ್ಲಿ ಬಲು ರಮ್ಯವಾಗಿ ಸಂಮಿಲಿತವಾಗಿವೆ. ನಮ್ಮ ಮಂಡಲಿಯು ಸಂಗಮದ ರಮಣೀಯತೆಯನ್ನು ಎವೆಯಿಕ್ಕದೆ ನೋಡಿ ಕಣ್ಣುಗಳನ್ನು ತಣಿಸಿ ಕೂಡಿಯೇ ಆನಂದವನ್ನು ಸವಿಯುತ್ತಿದ್ದರು.

ಅವರ ಆನಂದಾನುಭವಕ್ಕೆ ಊದಿಸುತ್ತ ಬಾರಿಸುತ್ತ ಹಿಂದಿನಿಂದ ಬರುತ್ತಿರುವ ಒಂದು ದಂಪತಿಗಳ ಮೆರವಣಿಗೆಯು ಭಂಗವನ್ನುಂಟುಮಾಡಿತು. ಅವರ ಸಂಗಡ ಒಬ್ಬ ಪಂಡಾನೂ ತನ್ನ ಸಾಹಿತ್ಯದೊಂದಿಗೆ ಬರುತ್ತಿದ್ದನು. ಆ ದಂಪತ್ಯಗಳಲ್ಲಿ ಗಂಡನು ಆದೇ ಕ್ಷೌರವನ್ನು ಮಾಡಿಸಿಕೊಂಡಿದ್ದನು. ನದಿಯಲ್ಲಿ ಒಂದು ನಾವು ಅವರೆಲ್ಲರನ್ನು ಕರೆದುಕೊಂಡು ಹೋಗಲಿಕ್ಕೆ ಸಜ್ಜವಾಗಿತ್ತು.

ದಂಪತ್ಯಗಳು ಹೊಸ ವಸ್ತ್ರಗಳನ್ನು ಧರಿಸಿದ್ದರು. ಆ ವಸ್ತ್ರಗಳು ಅವರವಲ್ಲ; ಪಂಡಾ ಜನರು ತಮ್ಮ ಮನೆಯಿಂದ ಕೊಟ್ಟಂಥವು. ಹೊಸ ವಸ್ತ್ರಗಳನ್ನೇ ಧಾರಣಮಾಡಿ ವೇಣೀದಾನಮಾಡಬೇಕೆಂದು ನಿಯಮವಿರುವದರಿಂದ ಪಂಡಾ ಜನರು ತಮ್ಮ ಮನೆಯಲ್ಲಿಯ, ಎಷ್ಟೋ ಯಾತ್ರಿಕರುಟ್ಟುಕೊಂಡ ಹೊಸ ವಸ್ತ್ರಗಳನ್ನು ಯಾತ್ರಿಕರಿಗೆ ಕೊಟ್ಟು ಅವುಗಳ ಬದಲಾಗಿ ಯೋಗ್ಯ ಬೆಲೆಯನ್ನು ಅವರಿಂದ ಇಸುಗೊಳ್ಳುವರು. ಡೋಣಿಯಲ್ಲಿ ಆ ದಂಪತ್ಯ ಪಂಡಾನಿಂದ ಸಹಿತವಾಗಿ ಕುಳಿತುಕೊಳ್ಳಲು ಡೋಣಿಯು ಸಂಗಮದ ಮಧ್ಯಪ್ರವಾಹಕ್ಕೆ ಸಾಗಿತು. ಆ ಮೇಲೆ ಗಂಡನು ಹೆಂಡತಿಯನ್ನು ತನ್ನ ತೊಡೆಯಮೇಲೆ ಕೂಡ್ರಿಸಿಕೊಂಡು ಅವಳಿಗೆ ಹೇಳಲು ಹಾಕಿದನು. ಆ ಮೇಲೆ ಮೂರು ಬೆರಳಿನಷ್ಟು ಕೂದಲುಗಳನ್ನೂ ಒಂದು ಬಂಗಾರದ

ರೂಪವನ್ನೂ ಅವಳ ಹೆಳಲಿನೊಳಗಿಂದ ಕತ್ತರಿಸಿ ಆ ಹೂವನ್ನು ಪಂಡಾನಿಗೆ ಕೊಟ್ಟು ಕೂದಲುಗಳನ್ನು ಗಂಗಾಪ್ರವಾಹದೊಳಗೆ ಚಲ್ಲಿದನು. ಆ ಮೇಲೆ ಎಲ್ಲರೂ ದಂಡೆಗೆ ಬಂದರು. ಇದೇ ವೇಣೀದಾನ ಸಮಾರಂಭವು.

ಇದರಂತೆ ಮುಂದೆ ಅನೇಕ ದಂಪತ್ಯಗಳು ವೇಣೀದಾನವನ್ನು ಮಾಡಿ ದರು. ಮದ್ರಾಸೀ ಹೆಂಗಸರಂತೂ ಈ ಕಾಲದಲ್ಲಿ ತಮ್ಮ ತಲೆಯನ್ನು ಪೂರಾ ಬೋಳಿಸಿಕೊಂಡು ತಲೆಗೊಂದು ವಸ್ತ್ರವನ್ನು ಕಟ್ಟಿಕೊಳ್ಳುತ್ತಿದ್ದರು.

"ರಾಮ, ರಾಮ, ಇದೇನಪ್ಪಾ, ಬಾಳೂ, ಈ ವೇಣೀದಾನದ ಅರ್ಥ ನೇನು? ನನಗಂತೂ ಏನೂ ತಿಳಿಯುವಲ್ಲದು" ಎಂದು ರಾಮರಾಯನು ಹೆಂಗಸರ ಕಡೆಗೆ ನೋಡಿ, ಚೇಷ್ಟೆಯ ನಗೆಯನ್ನು ನಗುತ್ತ ನುಡಿದನು.

"ರಾಮಣ್ಣಾ, ಹೀಗೇಕೆ ನಿಮ್ಮ ರೀತಿ? ಏನು ನೋಡಿದರೂ ಅದರ ಬಗ್ಗೆ ಚೇಷ್ಟೆ, ಉಪಹಾಸ ನಿಮ್ಮದು ಇದ್ದೇ ಅದೆ. ಇಷ್ಟೆಲ್ಲ ಜನರು ಭಕ್ತಿ ಯಿಂದ ಮಾಡುತ್ತಾರೆಂದ ಮೇಲೆ ಅದರಲ್ಲೇನಾದರೂ ಅರ್ಥವಿರಲಿಕ್ಕೇ ಬೇಕು" ಎಂದು ನರ್ಮದಾಬಾಯಿಯು ರಾಮರಾಯನ ನಗೆಯನ್ನು ತಡೆ ಯಲಾರದೆ ಅಂದಳು.

"ಏನಾದರೂ ಅರ್ಥವಿರಲಿಕ್ಕೆಬೇಕು ಇಂಥ ಹಾರಿಸುವ ಉತ್ತರ ನನಗೆ ಬೇಕಾಗಿಲ್ಲ. ಆ ಅರ್ಥವೇನೆಂಬದು ನನಗೆ ಬೇಕಾಗಿದೆ" ಎಂದು ಗಂಭೀ ರವಾಗಿ ರಾಮರಾಯನು ನುಡಿದನು.

"ಈ ಮೂರೂ ನದಿಗಳು ಕೂಡಿಭೂದೇವಿಗೆ ಹೆಳಲನ್ನು ಹಾಕಿರು ವಲ್ಲಿ, ಆ ಹೆಳಲಿನಲ್ಲಿ ತಮ್ಮ ಹೆಳಲಿನೊಳಗಿನ ಮೂರೆಳೆಗಳಾದರೂ ಕೂಡಿದರೆ ತಾವು ಧನ್ಯರಾಗಬಹುದೆಂಬ ಕಲ್ಪನೆಯು ಇದರಲ್ಲಿದ್ದಂತೆ ತೋರುತ್ತದೆ. ಅಥವಾ ಇದರಲ್ಲಿ ಇಂಥಾದ್ದೇ ಮತ್ತೇನಾದರೂ ಉದಾತ್ತ ಹೇತುವಿರಲಿಕ್ಕೆ ಬೇಕು" ಅಪ್ಪಾಸಾಹೇಬನು ತನ್ನ ಪತ್ನಿಯ ಪಕ್ಷಗಟ್ಟಿ ನುಡಿದನು.

"ಇದೊಂದು ಹೇತುವೇನೋ ಇರಬಹುದು. ಆದರೆ ಇದರಲ್ಲಿಯ ಉದಾತ್ತ ಸ್ವರೂಪವೇನೂ ನನ್ನ ಬುದ್ಧಿಗೆ ನಿಲುಕಲೊಲ್ಲದು. ಒಳ್ಳೇದು, ಹೆಂಗ ಸರು ವೇಣೀದಾನ ಮಾಡಬೇಕಾದರೆ, ಗಂಡಸರೇಕೆ ಕ್ಷೌರವನ್ನು ಮಾಡಿಸಿ ಕೊಳ್ಳಬೇಕು?" ಎಂದು ರಾಮರಾಯನು ಮತ್ತೊಂದು ತೊಡಕನ್ನು ಮುಂದಿಟ್ಟನು.

ಹೀಗೆ ಮಾತಾಡುತ್ತ ಎಲ್ಲರೂ ಊಟಕ್ಕೆ ಹೋಗಿ ಕುಳಿತು ಕೊಂಡರು. ಬಳವಂತರಾಯನು ಬಹಳಹೊತ್ತು ವಿಚಾರಮಾಡಿ ಕಡೆಗೆ ತನ್ನ ಅಭಿಪ್ರಾಯವನ್ನು ಹೇಳಿದನು.

" ಈ ವೇಣೀದಾನವು ಪೂರ್ವಕಾಲದಲ್ಲಿ ಯಾವದೊಂದು ಸದುದ್ದೇಶ ದಿಂದ ಹೊರಟಿರಬಹುದು. ರೈಲುಗಾಡಿಗಳಿಲ್ಲದಾಗ ಬಹುಶಃ ಮುಪ್ಪಿನ ಕಾಲ ದಲ್ಲಿಯೇ ಜನರು ಕಾಶೀಯಾತ್ರೆಗೆ ಹೊರಡುತ್ತಿದ್ದರು. ಆದ್ದರಿಂದ ಪ್ರಯಾ ಗಕ್ಕೆ ಬಂದು ಸನ್ಯಾಸವನ್ನು ತೆಗೆದುಕೊಳ್ಳುವದಕ್ಕಾಗಿ, ಗಂಡಸರು ಮುಂಡ ನವನ್ನೂ ಹೆಂಗಸರು ವೇಣೀದಾನವನ್ನೂ ಮಾಡುತ್ತಿರಬಹುದು. ಆದರೆ ಕಾಲಾಂತರದಿಂದ ಮೂಲ ಹೇತುವು ನಷ್ಟವಾಗಿ ಕೇವಲ ನಿರರ್ಥಕವಾದ ಒಂದು ಆಚಾರವು ಮಾತ್ರ ಈಗ ಉಳಿದದೆ. ನಮ್ಮ ಎಲ್ಲ ಆಚಾರಗಳದೂ ಇದೇ ಹಾಡು. ಅವು ಮೊದಲು ಹುಟ್ಟಿದಾಗ ಸಹೇತುಕವಾಗಿಯೂ ಸಮಂಜಸ ವಾಗಿಯೂ ಇರಬೇಕು. ಮುಂದೆ ಬರಬರುತ್ತ ಖೊಬ್ಬರಿ ಹೊರಟುಹೋಗಿ ಬರೇ ಪರಟೆಯಷ್ಟೇ ಉಳಿಯುವಂತೆ, ಮೊದಲು ಉದ್ದಿಷ್ಟವಾದ ಸಂಸ್ಕಾರ ಗಳು ಹೊರಟುಹೋಗಿ ಬರೇ ಹುರುಳಿಲ್ಲದ ಕುರುಡು ಸಂಪ್ರದಾಯಗಳು ಮಾತ್ರ ಉಳಿದು, ಮೂಢ ಧರ್ಮವಾಗಿ ಪರಿಣಮಿಸಿವೆಯೆಂದು ನನಗೆ ತೋರುತ್ತದೆ. "

ಇದರ ಮೇಲೆ ರಾಮರಾಯನದು ಮತ್ತೊಂದು ಆಕ್ಷೇಪ. " ಸನ್ಯಾ ಸವನ್ನು ತಕ್ಕೊಳ್ಳಬೇಕಾದರೆ ಗಂಡಸರಿಗೆ ಮುಂಡನವುಂಟು. ಆದರೆ ಹೆಂಗ ಸರು ಯಾಕೆ ಕೂದಲವನ್ನು ಕತ್ತರಿಸಿಕೊಳ್ಳಬೇಕು ? "

" ಓಹೋ, ಹೌದು, ನಿನ್ನ ಸಂಶಯವು ಸರಿಯಾಗಿದೆ. ಬಹುತರವಾಗಿ ಈ ಸ್ತ್ರೀಮುಂಡನವು ಬೌದ್ಧಕಾಲದ ಸ್ತ್ರೀಸನ್ಯಾಸಿನಿಯರಿಂದ ಬಂದಿರಬಹುದು, ಅಂತೂ ಈ ತೊಡಕು ಇತಿಹಾಸಜ್ಞರ ವಿಷಯವಾಗಿದೆ. ನಮ್ಮ ವಿಷಯ ವಲ್ಲ. ಸಧ್ಯಕ್ಕೆ ಈ ವಿಧಾನದಲ್ಲಿ ಅಂಧ ಶ್ರದ್ಧೆಗಿಂತ ಹೆಚ್ಚಿನದೇನೂ ಅರ್ಥವಿಲ್ಲ- ಸಂಸ್ಕಾರವಿಲ್ಲ. ಇಷ್ಟೇ ನಮಗೆ ಬೇಕಾದದ್ದು " ಎಂದು ಹೇಳಿ ಬಳವಂತ ರಾಯನು ಮಾತು ಮುಗಿಸಿದನು.

ಹೆಂಗಸರಿಗೇನೂ ಮೇಲಿನ ವಿಚಾರಸರಣಿಯು ಸರಿಬೀಳಲಿಲ್ಲ. ಎಲ್ಲ ರಂತೆ ತಾವೂ ವೇಣೀದಾನವನ್ನು ಮಾಡಬೇಕೆಂದು ಶಾರದೆಗೂ ನರ್ಮದೆಗೂ

ಅನಿಸಿತು. ಆದರೆ ಗಂಡಸರ ವಿರುದ್ಧ ಟೀಕೆಯಿಂದ ಅವರಿಗೆ ಮಾತಾಡಲಿಕ್ಕೆ ಧೈರ್ಯಸಾಲಲಿಲ್ಲ. ರಾಮರಾಯನು ಮಾತ್ರ ಇದನ್ನು ಕಂಡು ಹಿಡಿದು, "ಯಾಕೆ? ತೊಡೆಯ ಮೇಲೆ ಕೂತುಕೊಂಡು ಹೇಳಲು ಹಾಕಿಸಿಕೊಳ್ಳುವ ಅಪೇಕ್ಷೆಯುದೆಯೇನು ನಿನಗೆ? ಇದ್ದರೆ ನೋಡು ನಾನಂತೂ ಸಿದ್ಧ" ಎಂದು ಶಾರದೆಯ ಮೋರೆಯ ಕಡೆಗೆ ಚೇಷ್ಟೆಯಿಂದ ನಗುತ್ತ ನುಡಿದನು.

"ಸಾಕು ನಿಮ್ಮ ನಗೆಚಾಟಿಕೆ. ಒಂದು ಧರ್ಮವಿಲ್ಲ; ಒಂದು ಪುಣ್ಯವಿಲ್ಲ. ಪ್ರತಿಯೊಂದು ಆಚಾರದ ಮೇಲೂ ನಿಮ್ಮ ಟೀಕೆ, ನಿಮ್ಮ ನಗೆ. ನಿಮ್ಮ ಮಾತನ್ನು ಯಾರಾದರೂ ಕೇಳಿದರೆ ಶುದ್ಧ ಪಾಖಂಡಿಗಳೆಂದು ನಿಮಗೆ ಅನ್ನುವದರಲ್ಲಿ ಸಂಶಯವಿಲ್ಲ" ಎಂದು ಶಾರದೆಯು ಮೋರೆಯನ್ನು ಕಿವುಚಿ ತನ್ನ ಅಸಮಾಧಾನವನ್ನು ಹೊರಗೆ ಹಾಕಿದಳು.

"ಸಾಕುಸಾಕು ಈ ಪ್ರವಚನ. ನಡೆಯಿರಿನ್ನು. ಹೊತ್ತಾಯಿತು. ಸ್ನಾನಕ್ಕೆ ಹೋಗೋಣ" ಎಂದು ರಾಧಾಬಾಯಿಯು ತನ್ನ ಕಕ್ಷಪಾಳಿಯ ಗಂಟನ್ನು ತೆಗೆದುಕೊಂಡು ಎದ್ದು ನಿಂತಳು.

ಎಲ್ಲರೂ ಸಂಗಮದಲ್ಲಿ ಮನದಣಿಯುವಂತೆ ಸ್ನಾನ ಮಾಡಿದರು. ಬಳವಂತರಾಯನು ಸಂಧ್ಯೆಯನ್ನು ಮಾಡಿ ಸಂಗಮದ ಪವಿತ್ರ ವಾತಾವರಣದಲ್ಲಿ ಮನಃಪೂರ್ವಕವಾಗಿ ದೇವರಿಗೆ ಪ್ರಾರ್ಥನೆಗೈದನು. ಹೆಂಗಸರು ಗಂಗಾಪೂಜೆಯನ್ನು ಮಾಡಿ ದಕ್ಷಿಣೆಯನ್ನು ಕೊಟ್ಟರು. ರಾಮರಾಯನೂ ಅಪ್ಪಾಸಾಹೇಬನೂ ಗಂಗಾದೇವಿಯ ಸೊಬಗನ್ನು ಮನವಾರೆ ಸವಿಯುತ್ತಿದ್ದರು.

ಮನೆಗೆ ತಿರುಗಿ ಬರುವಷ್ಟರಲ್ಲಿ ಮಧ್ಯಾಹ್ನ ಒಂದು ಘಂಟೆಯಾಯಿತು. ಆ ಮೇಲೆ ಅಡಿಗೆ ಹೂಡುವ ತ್ರಾಸವನ್ನು ಹೆಂಗಸರಿಗೆ ಹಚ್ಚದೆ ಎಲ್ಲರೂ ಹಾಲು, ಹಣ್ಣು ಹಂಪಲುಗಳಿಂದ ತಮ್ಮ ಕ್ಷುಧಾಶಾಂತಿಯನ್ನು ಮಾಡಿಕೊಂಡು ಇಳಿಹೊತ್ತಿನವರೆಗೆ ವಿಶ್ರಮಿಸಿದರು.

ಆ ಮೇಲೆ ನಮ್ಮ ಯಾತ್ರಿಕರು ವೇಣೀಮಾಧವ ದೇವಸ್ಥಾನ, ಭಾರದ್ವಾಜಾಶ್ರಮ, ಸೀತಾಗುಂಫಾ ಮೊದಲಾದ ಪ್ರೇಕ್ಷಣೀಯ ದೇವಸ್ಥಾನ

ಗಳಿಗೆ ಹೋಗಿ ಪೂಜೆಯನ್ನು ಮಾಡಿಸಿದರು. ದೇವಸ್ಥಾನಗಳಲ್ಲೆಲ್ಲ ತಿರುಕರ ಪಿಡುಗು ಬಹಳ. ತಿರುಕರಲ್ಲಿ ಎಷ್ಟೋ ಜನರು ಮಹಾ ರೋಗಿಗಳೂ, ಕುಷ್ಟ ರೋಗಿಗಳೂ, ಇನ್ನೆಷ್ಟೋ ಸಾಂಸರ್ಗಿಕ ರೋಗ ಪೀಡಿತರೂ, ಇರುವರು. ಇವರು ಸಾಲುಸಾಲಾಗಿ ದೇವಸ್ಥಾನಗಳ ಬಾಗಿಲದ ಹತ್ತಿರ ಕುಳಿತು ಬರಹೋಗುವ ಯಾತ್ರಿಕರಿಗೆ ತುಂಬಾ ತೊಂದರೆಗೊಡುತ್ತಿದ್ದರು. ಇದನ್ನು ನೋಡಿ ರಾಮರಾಯನು "ಬಾಳೂ, ಇದೇನು ಬ್ರಹ್ಮಾಂಡ ತೊಂದರೆಯಪ್ಪಾ ಯಾತ್ರಿಕರಿಗೆ ಇವರ ಕಾಟ ಹೇಗೆ ತಪ್ಪೀತು?" ಎಂದು ಗುಣುಗುಟ್ಟಿದನು.

ಬಳವಂತರಾಯನು ಅಂದದ್ದು—"ಯಾತ್ರಿಕರಿಗೆ ಈ ತಿರುಕರಿಂದಾಗುವ ತೊಂದರೆಯನ್ನು ತಪ್ಪಿಸಲಿಕ್ಕೆ ಯಾರೂ ಪ್ರಯತ್ನ ಮಾಡುವಂತೆ ಕಾಣುವದಿಲ್ಲ. ಮ್ಯುನಿಸಿಪಾಲಿಟಿಯವರಿಗಂತೂ ಸಧ್ಯದ ಕೆಲಸವೇ ಹೀಗದ ಹಾಗಾಗಿದೆ. ದೇವಸ್ಥಾನ ಕಮಿಟಿಯವರೇ ಇದರ ವ್ಯವಸ್ಥೆ ಮಾಡಬೇಕು. ಯಾತ್ರಿಕರು ದೂರ ದೂರದ ಪ್ರಾಂತಗಳಿಂದ ಬಂದು ದೇವರಿಗೆ ಸಲ್ಲಿಸುವ ಮುಡುಪಿನ ದುಡ್ಡು ಬೇಕಾದಷ್ಟು ಇರಲು, ಅದೆಲ್ಲ ದೇವರ ನೈವೇದ್ಯ, ಅರ್ಚಕರಿಗೂ ಅವರ ಮನೆಯವರಿಗೂ ಸಮಿಾಚೀನ ಊಟ ಉಡಿಗೆ, ಇವುಗಳಿಗೆ ಮಾತ್ರ ಬಹ್ವಂಶದಿಂದ ವೆಚ್ಚವಾಗುತ್ತದೆ. ಆ ದುಡ್ಡಿನಿಂದ ಈ ರೋಗಿಗಳಾದ ತಿರುಕರಿಗಾಗಿ ಒಂದೊಂದು ಆಸ್ಪತ್ರೆಯನ್ನೂ ಅಂಗಹೀನರಿಗಾಗಿ ಒಂದೊಂದು ಉದ್ಯೋಗ ಶಾಲೆಯನ್ನೂ ನಡೆಯಿಸಬಹುದು. ಆದರೆ ಯಾರೂ ಇದರ ಕಡೆಗೆ ಮನಸ್ಸನ್ನೇ ಹಾಕುವದಿಲ್ಲ. ಹೀಗಾಗಿ ದೇವಸ್ಥಾನಗಳ ಮಹಾದ್ವಾರಗಳು ತಿರುಕರ ಆಗರಗಳಾಗಿವೆ."

ಮರುದಿವಸ ಮುಂಜಾನೆ ಶ್ರಾದ್ಧದ ವಿಷಯಕ್ಕೆ ಹೆಂಗಸರೊಳಗೆ ಗುಜುಗುಜು ನಡೆದಿತ್ತು. ಬಳವಂತನ ಅನಾಸ್ಥೆಯನ್ನು ನೋಡಿ ರಾಧಾಬಾಯಿಯ ಮೋರೆಯು ಸಪ್ಪಗಾಗಿತ್ತು. ಇದನ್ನು ತಿಳಿದು ಬಳವಂತನು ಅಪ್ಪಾಸಾಹೇಬನಿಗೆ- "ಏನು ಸಾಹೇಬ, ನಿಮಗೆ ಪ್ರಯಾಗ ಕ್ಷೇತ್ರದಲ್ಲಿ ಶ್ರಾದ್ಧಗಳನ್ನು ಮಾಡುವ ವಿಚಾರವಿಲ್ಲೇನು?" ಎಂದು ಕೇಳಿದನು.

ಅಪ್ಪಾಸಾಹೇಬ- "ಛೇ, ನಾನು ಎಂದಿನಿಂದಲೂ ಈ ಶ್ರಾದ್ಧಗಳ ಪೇಚಾಟದಲ್ಲಿ ಬಿದ್ದವನಲ್ಲ. ಈಗಂತೂ ನಾನು ಜಾತಿಬಾಹಿರ. ಮಾಡ

ಬೇಕೆಂದರೂ ಯಾರೂ ನನ್ನ ಕಡೆಯಿಂದ ಮಾಡಿಸುವದಿಲ್ಲ" ಎಂದು ಉತ್ತರ ಕೊಟ್ಟನು.

ಶ್ರಾದ್ಧದ ಪ್ರಸ್ತಾಪ ತಾನಾಗಿ ಹೊರಟದ್ದು ಕೇಳಿ ರಾಧಾಬಾಯಿಯು ಮಗನಿಗೆ- "ಬಾಳೂ, ಇಂಥಾ ಮಹಾ ಕ್ಷೇತ್ರಕ್ಕೆ ಬಂದು ನೀನು ಶ್ರಾದ್ಧ ಮಾಡುವ ಮಾತನ್ನೇ ತೆಗೆಯುವದಿಲ್ಲವಲ್ಲ!" ಎಂದು ಬಹಳ ಕಳವಳದಿಂದ ನುಡಿದಳು.

ಬಳವಂತ- "ಅವ್ವಾ, ಇದು ಮಹಾಕ್ಷೇತ್ರವಾದರೂ ಶ್ರಾದ್ಧ ಮಾಡಿಸುವ ಪುಂಡ ಜನರನ್ನು ನೋಡಿದೆಯಲ್ಲ. ಅವರ ಠಕ್ಕತನವನ್ನೂ ದುಷ್ಟನ ನೀಚನ ಲೋಭವನ್ನೂ, ವ್ಯಾಪಾರಿ ವೃತ್ತಿಯನ್ನೂ, ಶ್ರೀಮಂತಿಕೆಯ ಠೀವಿಯನ್ನೂ ನೋಡಿದರೆ-ಅವರ ಕಡೆಯಿಂದ ಶ್ರಾದ್ಧ ಮಾಡಿಸಬೇಕು,-ಮಾಡಿಸಿದರೆ ನಮ್ಮ ಪಿತೃಗಳಿಗೆ ತೃಪ್ತಿಯಾದೀತು-ಎಂದು ನನಗೇನೂ ಅನಿಸುವದಿಲ್ಲ. ಬೇಕಾದರೆ ನಾನೇ ಶ್ರಾದ್ಧ ಮಂತ್ರಗಳನ್ನು ಓದು ಕುರುಡಕುಂಟರಿಗೆ ಅನ್ನಾ ಹಾಕುವೆ ಅಥವಾ ಒಂದು ಪಾಠಶಾಲೆಗೆ ದುಡ್ಡು ಕೊಡುವೆ" ಎಂದು ನಿಷ್ಠುರವಾಗಿ ಹೇಳಿಬಿಟ್ಟನು.

ರಾಧಾಬಾಯಿ- "ತಮ್ಮಾ, ನೀನು ಹೇಳುವದೆಲ್ಲ ಬುದ್ಧಿಗೆ ಸರಿಯೆನಿಸುತ್ತದೆ. ಆದರೆ ಅಂತಃಕರಣವು ಒಪ್ಪುವದಿಲ್ಲ. ಇವೆಲ್ಲ ವಿಚಾರಗಳು ಕಾಲಕ್ರಮದಿಂದ ಕಾರ್ಯರಂಗದಲ್ಲಿ ಇಳಿಯಬೇಕೇ ಹೊರತು ಎರಡನೇ ಮಾರ್ಗವಿಲ್ಲ. ನೀನು ಶ್ರಾದ್ಧ ಮಾಡದಿದ್ದರೆ, ನನ್ನ ಎದೆಯಲ್ಲಿ ಮಾತ್ರ ಕಡೆತನಕ ಕಚ್ಚು ಉಳಿಯುವದು ನೋಡು. ನೀನು ಬಹಳ ಶ್ರಾದ್ಧಗಳನ್ನು ಮಾಡದಿದ್ದರೂ ಬಿಡು. ಇಲ್ಲಿ ಒಂದು. ಕಾಶಿಯಲ್ಲಿ ಒಂದು. ಗಯೆಯಲ್ಲಿ ಒಂದು ಹೀಗೆ ಕನಿಷ್ಠ ಮೂರು ಶ್ರಾದ್ಧಗಳನ್ನಾದರೂ ಮಾಡಲೇಬೇಕು;" ಎಂದು ಬಹಳ ಮನಸ್ಸಿಗೆ ಹಚ್ಚಿಕೊಂಡು ಹೇಳಿದಳು.

ಬಳವಂತ- "ಅವ್ವಾ, ಇಷ್ಟು ನಿನ್ನ ಮನಸ್ಸಿನಲ್ಲಿದ್ದರೆ ಆಗಲಿ. ಮಾಡುವೆನು" ಎಂದು ವಚನವನ್ನು ಕೊಟ್ಟನು.

ಆ ಮೇಲೆ ಒಬ್ಬ ಸಂಭಾವಿತ ಕಾಣುವ ಪಂಡನನ್ನು ಕರಕೊಂಡು ಬಂದನು. ಅವನು ಮೊದಲು "ನೀವು ಶ್ರೀಮಂತರಾಗಿ ಕಾಣುತ್ತೀರಿ.

ಇಪ್ಪತ್ತು ರೂಪಾಯಿ ಕೊಡಲಿಕ್ಕೆಬೇಕು, ಮೂವತ್ತು ರೂಪಾಯಿ ಕೊಡಲಿಕ್ಕೆಬೇಕು'' ಎಂದು ಬಹಳ ಹಾರಾಡಿದನು. ಬಳವಂತರಾಯನು ''ಐದು ರೂಪಾಯಿಗಿಂತ ಹೆಚ್ಚಿಗೆ ನಾನು ಕೊಡಲಾರೆ'' ಎಂದು ಹೇಳಿದನು. ''ಹಾಗಾದರೆ ನಿಮ್ಮ ಯೋಗ್ಯತೆಯು ಇಷ್ಟೇ ಎಂದು ಪ್ರಮಾಣಪೂರ್ವಕವಾಗಿ ಹೇಳಿರಿ'' ಎಂದು ಎನ್ನಲು ಬಳವಂತರಾಯನು ಸಿಟ್ಟಿಗೆದ್ದು ಅವನನ್ನು ಕಳಿಸಿಬಿಡುವ ವಿಚಾರದಲ್ಲಿದ್ದನು. ಅವನ ತಾಯಿಯು ಅಡ್ಡ ಬಂದು ಅವನಿಗೆ ಸಮಾಧಾನ ಹೇಳಿದಳು. ಅಂತೂ ಇಂತೂ ಶ್ರಾದ್ಧವು ಮುಗಿಯಿತು.

ಈ ಪುಂಡ ಜನರಿಗೆ ಯಾತ್ರಿಕರಿಂದ ಶ್ರಾದ್ಧ ಮಾಡಿಸಿ ದುಡ್ಡು ಸೆಳೆಯುವದೇ ಉದ್ಯೋಗ. ಈ ಉದ್ಯೋಗದಿಂದ ಎಷ್ಟೋ ಜನರು ಬಹಳ ಶ್ರೀಮಂತರಾಗಿರುತ್ತಾರೆ. ಅವರು ಹೇಳಿದಷ್ಟು ದುಡ್ಡು ಕೊಟ್ಟು ಅವರನ್ನು ತೃಪ್ತಿಪಡಿಸಿದರೇ ತಮ್ಮ ಪಿತೃಗಳಿಗೆ ಸದ್ಗತಿಯಾಗುವದೆಂದು ಭಾವಿಕರು ತಿಳಿಯುತ್ತಾರೆ. ಧರ್ಮಮೂಢರ ಈ ಅಂಧವಿಶ್ವಾಸವನ್ನು ಕಂಡುಹಿಡಿದು ಪುಂಡಜನರು ಅವರನ್ನು ಮನಸೋಕ್ತ ಪೀಡಿಸುತ್ತಾರೆ. ಪ್ರಯಾಗದಲ್ಲಿ ಮಾತ್ರ ಹೀಗಂತಲ್ಲ. ಎಲ್ಲ ಕ್ಷೇತ್ರಗಳಲ್ಲಿಯೂ ಕ್ಷೇತ್ರ ಬ್ರಾಹ್ಮಣರ ರೀತಿಯೇ ಹೀಗೆ. ವಿಚಾರವಂತನಿಗೆ ಅವರಲ್ಲಿ ಎಂದೂ ಭಕ್ತಿ ಹುಟ್ಟುವ ಸಂಭವವಿಲ್ಲ.

ಶ್ರಾದ್ಧವಾದ ಮರುದಿವಸ ಮುಂಜಾನೆ ರೈಲಿನಿಂದ ನಮ್ಮ ಮಂಡಲಿಯು ಪ್ರಯಾಗದಿಂದ ಹೊರಟು ಕಾಶೀ ಕ್ಷೇತ್ರಕ್ಕೆ ಬಂದರು.

ಕಾಶೀ ಕ್ಷೇತ್ರವು ಪುರಾಣ ಕಾಲದಿಂದಲೂ ಪವಿತ್ರವೆನಿಸಿದ ಕ್ಷೇತ್ರವು. ಇದು ಪ್ರಾಚೀನ ಕಾಲದಿಂದ ಆರ್ಯರ ಎಲ್ಲ ವಿದ್ಯೆಗಳಿಗೂ ಕಲೆಗಳಿಗೂ ಮುಖ್ಯ ಪೀಠವೆನಿಸಿಕೊಂಡಿದೆ. ಈ ಪಟ್ಟಣದಲ್ಲಿ ಹಿಂದುಸ್ತಾನದ ಎಲ್ಲ ಪ್ರಾಂತಗಳ, ಎಲ್ಲ ಮತಗಳ, ಎಲ್ಲ ಭಾಷೆಗಳ ಜನರನ್ನು ಕಾಣಬಹುದು. ಭಾವಿಕರಿಗೆ ಇದು ಭೂಲೋಕದಲ್ಲಿಯ ಸ್ವರ್ಗ.

ಕಾಶೀ ಪಟ್ಟಣದೊಳಗಿನ ಓಣಿಗಳು ಬಹಳ ಕಿರಿದು. ಮನೆಗಳು ಬಹಳ ಎತ್ತರವಾದವುಗಳು. ಊರೊಳಗಿನ ಗಟಾರಗಳೆಲ್ಲ ಗಂಗಾ ನದಿಗೆ ಹೋಗಿ ಕೂಡುತ್ತವೆ. ಗಂಗಾ ನದಿಯ ಘಾಟಿನ ಮೇಲೆ ಪ್ರಚಂಡವಾದ, ಕಿಕ್ಕಿರಿದ ಜನಸಂದಣಿ. ಹೆಣಗಳನ್ನು ಪೂರಾ ಸುಡದೆ ನದಿಯಲ್ಲಿ ಕಟ್ಟಿಗೆಯಿಂದ ಚಿಮ್ಮ

ದ್ವಾರಾ ನಮ್ಮ ಪ್ರವಾಸಿಕರು ಒಂದು ಧರ್ಮಶಾಲೆಯಲ್ಲಿ ಇಳುಕೊಂಡರು. ಮಧ್ಯಾಹ್ನದ ಊಟವನ್ನು ಹೋಟೆಲಿನಲ್ಲಿ ತೀರಿಸಿಕೊಂಡು ಸ್ವಲ್ಪ ವಿಶ್ರಾಂತಿಯನ್ನು ಹೊಂದಿ ಬಿಸಿಲು ಇಳಿದ ಮೇಲೆ ಬಳವಂತನು ತನ್ನ ತಮ್ಮನೊಂದಿಗೆ ನಗರದ ಪುರಾತನ ವೈಭವದ ಕುರುಹುಗಳನ್ನು ನೋಡಲಿಕ್ಕೆ ಹೊರಟನು.

ಸಾಂಪ್ರತದ ಅಯೋಧ್ಯೆಯನ್ನು ನೋಡಿದಕೂಡಲೆ ಶ್ರೀರಾಮಚಂದ್ರನ ರಾಜಧಾನಿಯಾದ ಪುರಾತನ ಅಯೋಧ್ಯೆಯು ನೆನಪಾಗಿ ಪ್ರತಿಯೊಬ್ಬ ಹಿಂದೂ ಯಾತ್ರಿಕನ ಎದೆಯಲ್ಲಿ ಕಳವಳವುಂಟಾಗುತ್ತದೆ. ಅನೇಕ ರಾಜಗೃಹಗಳಿಂದಲೂ ರಾಜಸಭಾಮಂದಿರಗಳಿಂದಲೂ, ಉದ್ಯಾನ ಪುಷ್ಪವಾಟಿಕೆಗಳಿಂದಲೂ ವಿರಾಜಿಸುತ್ತ ಸಾಮ್ರಾಜ್ಯನಗರಿಯೆಂದೆನಿಸಿಕೊಂಡು ಮೆರೆಯುತ್ತಿದ್ದ, ವಾಲ್ಮೀಕಿಯು ವರ್ಣನೆ ಮಾಡಿದ, ಶ್ರೀರಾಮಚಂದ್ರನ ಅಯೋಧ್ಯೆಯು ನೆನಪಾಗುತ್ತದೆ. ಆ ಮೇಲೆ ಇಡೀ ಭರತಖಂಡದಲ್ಲಿ ಭಗವಂತನ ಅವತಾರನೆಂದು ಪೂಜೆ ಹೊಂದುತ್ತಿರುವ ಶ್ರೀರಾಮನ ಪರಮಪಾವನವಾದ ಚರಿತ್ರೆಯು ಮನಶ್ಚಕ್ಷುವಿನ ಮುಂದೆ ಗೋಚರವಾಗುತ್ತದೆ.

ಶ್ರೀರಾಮನು ಪಿತೃವಚನವನ್ನು ಪಾಲಿಸಲಿಕ್ಕೆ ಅರಸೊತ್ತಿಗೆಯನ್ನು ತನ್ನ ತಮ್ಮನಿಗೆ ಬಿಟ್ಟುಕೊಟ್ಟದ್ದಲ್ಲದೆ ಮನೆಯನ್ನು ಸಹ ಬಿಟ್ಟು ಹದಿನಾಲ್ಕು ವರ್ಷ ವನವಾಸವನ್ನು ಕೈಕೊಂಡು ಜಟಾವಲ್ಕಲಧಾರಿಯಾಗಿ ನಿಬಿಡಾರಣ್ಯಮಯವಾದ ಇಡೀ ಭರತಖಂಡವನ್ನು ಸುತ್ತಿ ದುಷ್ಟರನ್ನು ದಂಡಿಸಿ ಶಿಷ್ಟರನ್ನು ಪರಿಪಾಲಿಸಿದನು. ಅರಸೊತ್ತಿಗೆಯು ಬಂದ ಮೇಲೆ ಕೇವಲ ಪ್ರಜಾಹಿತಬುದ್ಧಿಯಿಂದ ತನ್ನ ಪಂಚಪ್ರಾಣಳಾದ ಸೀತಾದೇವಿಯನ್ನು ಬಿಟ್ಟುಬಿಟ್ಟನು. ಶ್ರೀರಾಮನ ಪಿತೃಭಕ್ತಿ, ಧರ್ಮನಿಷ್ಠೆ, ಪ್ರಜಾವಾತ್ಸಲ್ಯ, ಬಂಧುಪ್ರೇಮ, ಎಲ್ಲವೂ ಅಮಾನುಷ, ಅಲೌಕಿಕ. ಸೀತಾದೇವಿಯ ಪತಿಪ್ರೇಮವೂ ಅಲೌಕಿಕ. ಲಕ್ಷ್ಮಣನ ಭ್ರಾತೃನಿಷ್ಠೆಯೂ ಅಲೌಕಿಕ. ಮಾರುತಿಯ ಸ್ವಾಮಿನಿಷ್ಠೆಯೂ ಅಲೌಕಿಕ. ಅಂತೆಯೇ ಹಿಂದೂ ಜನರು ಇವರೆಲ್ಲರ ಮೂರ್ತಿಗಳನ್ನು ಮಾಡಿ ದೇವರೋಳಗಿಟ್ಟು ಪೂಜಿಸಿದರೆ ಅದರಲ್ಲೇನಾಶ್ಚರ್ಯ? ಆದರೆ ಕೇವಲ ಪಂಚೋಪಚಾರದ ಅಥವಾ ಷೋಡಶೋಪಚಾರದ ಪೂಜೆಯು ಬೇಡ; ಮನಃಪೂರ್ವಕವಾದ ಗುಣಪೂಜೆಯು ಬೇಕಾಗಿದೆ.

ಬಳವಂತರಾಯನು ತನ್ನ ತಮ್ಮನೊಂದಿಗೆ ಅಯೋಧ್ಯೆಯಲ್ಲಿ ಪುರಾತನ

ವೈಭವದ ಎಲ್ಲ ಕುರುಹುಗಳನ್ನೂ ನೋಡಿಕೊಂಡನು. ಹೀಗೆಯೇ ಆ ಮಾತು ಈ ಮಾತು ಆಡುತ್ತ ಪಟ್ಟಣದೊಳಗೆ ಬರುತ್ತಿರಲಿಕ್ಕೆ ಸಂಜೆಯು ಕತ್ತಲೆಗವಿದು ಅವರಿಗೆ ದಾರಿಯೇ ತಪ್ಪಿ ಹೋಯಿತು. ಎಷ್ಟು ತಿರುಗಿದರೂ ಧರ್ಮಶಾಲೆಯ ದಾರಿಯೇ ಸಿಕ್ಕಲಿಲ್ಲ. ಕಡೆಗೆ ಹಸಿದು ಬಾಯಾರಿ ನೀರಡಿಕೆಯನ್ನು ಹಿಂಗಿಸಿಕೊಳ್ಳುವದಕ್ಕಾಗಿ ಒಬ್ಬ ಬ್ರಾಹ್ಮಣನ ಮನೆಯನ್ನು ಹೊಕ್ಕರು.

ಮನೆಯ ಯಜಮಾನನು ಇಳಿವಯಸ್ಸಿನವನು. ಬೀದಿಗೆ ಕಾಣುವಂತೆ ಪಡಸಾಲೆಯಲ್ಲಿ ಕಸ ಹೊಡೆಯುತ್ತಿದ್ದನು. ಅವನ ಉಡಿಗೆ ತೊಡಿಗೆಗಳು ಬ್ರಾಹ್ಮಣರಂತೆಯೇ. ಆಗಂತುಗಳು ಮನೆಯ ಬಾಗಿಲಿಗೆ ಬಂದಕೂಡಲೆ ಗೃಹಸ್ಥನು ಕೂಡಲೆ ತಲೆಬಾಗಿಲಿಗೆ ಬಂದು "ಸ್ವಾಮಿ, ನಿಮಗೆ ಏನು ಬೇಕು?" ಎಂದು ಕೇಳಿದನು.

"ನಮಗೆ ನೀರಡಿಕೆಯಾಗಿದೆ. ನಿಮ್ಮ ಮನೆಯಲ್ಲಿ ಸ್ವಲ್ಪ ನೀರು ಸಿಕ್ಕೀತೇ?" ಬಳವಂತನು ಪ್ರಶ್ನೆ ಮಾಡಿದನು.

ಇವರು ಬಂದ ಉದ್ದೇಶವನ್ನು ಕೇಳಿದ ಕೂಡಲೆ ಆ ಮುದುಕನು ಸ್ವಲ್ಪ ಹೊತ್ತು ಏನೂ ಮಾತಾಡದೆ ಆಶ್ಚರ್ಯದಿಂದ ಅವರ ಮೋರೆಯ ಕಡೆಗೆ ಮಿಕಿಮಿಕಿ ನೋಡುತ್ತ ನಿಂತನು.

"ಯಾಕೆ? ಇಷ್ಟು ಅನುಮಾನ?" ಎಂದು ರಾಮರಾಯನು ಪ್ರಶ್ನೆ ಮಾಡಿದನು.

"ಸ್ವಾಮಿ, ನೀವು ಬ್ರಾಹ್ಮಣರಂತೆ ಕಾಣಿಸುತ್ತೀರಿ ಆದರೆ ಇದು ಬ್ರಾಹ್ಮಣರ ಮನೆಯಲ್ಲ. ಕ್ರೈಸ್ತರ ಮನೆಯು. ಅದು ನಿಮಗೆ ತಿಳಿಯದೆ ನೀವು ಬಂದಿರುವಿರೇನೋ ಎಂದು ನನಗೆ ಅನುಮಾನ" ಎಂದು ತನ್ನ ಅಚ್ಚರಿಯ ಕಾರಣವನ್ನು ಹೇಳಿದನು.

ಇದನ್ನು ಕೇಳಿದ ಕೂಡಲೆ ಆಗಂತುಗಳು ದಂಗುಬಡಿದವರಾಗಿ ಒಬ್ಬರ ಮೋರೆಯನ್ನೊಬ್ಬರು ನೋಡುತ್ತ ನಿಂತರು.

ಆಗ ಆ ಮುದುಕನು—"ನನ್ನ ಉಡಿಗೆತೊಡಿಗೆಗಳನ್ನೂ ಮುಖಚರ್ಯೆಯನ್ನೂ ನೋಡಿ ನಿಮಗೆ ನಾನು ಬ್ರಾಹ್ಮಣನೆಂದು ಅನಿಸಿದ್ದು ಸಹಜವವೆ. ನಮ್ಮ ಅಜ್ಜನ ಕಾಲದಲ್ಲಿ ನಾವು ಬ್ರಾಹ್ಮಣರೇ ಇದ್ದೆವು. ಆಗ ಯಾವನೋ ಒಬ್ಬ ಪಾದ್ರಿಯು ನಮ್ಮ ಬಾವಿಯಲ್ಲಿ ಎಲುಬಿನ ತುಂಡು

ಗಳನ್ನೂ ಕ್ರೈಸ್ತರ ರೊಟ್ಟಿಯನ್ನೂ ಹಾಕಿದನು. ಇದು ನಮ್ಮ ಅಜ್ಜನಿಗೆ ತಿಳಿಯದೆ ಅವನೂ ಮನೆಯವರೂ ಹಾಗೆಯೇ ಒಂದೆರಡು ದಿವಸ ನೀರು ಕುಡಿಯುತ್ತ ಹೋಗಲು ಯಾರೋ ಈ ಸುದ್ದಿಯನ್ನು ನಮ್ಮ ಬ್ರಾಹ್ಮಣ ಸಮಾಜಕ್ಕೆ ಚುಚ್ಚಿಕೊಟ್ಟರು. ಆ ಮೇಲೆ ಕೆಲವು ಬ್ರಾಹ್ಮಣರು ಒಂದು ನಮ್ಮ ಬಾವಿಯನ್ನು ಸ್ವಲ್ಪ ಶೋಧಿಸಿ ನೋಡಲಾಗಿ ಅದರಲ್ಲಿ ಎಲುಬುಗಳೂ ರೊಟ್ಟಿಯ ತುಂಡುಗಳೂ ಸಿಕ್ಕವು. ಅಂದಿನಿಂದ ನಮ್ಮ ಅಜ್ಜನನ್ನು ಜಾತಿಯಿಂದ ಹೊರಗೆ ಹಾಕಿದರು. ಬೇಕಾದ ಪ್ರಾಯಶ್ಚಿತ್ತವನ್ನು ತಕ್ಕೊಳ್ಳುವೆನೆಂದು ನಮ್ಮಜ್ಜನು ಹೇಳಿದರೂ ಬ್ರಾಹ್ಮಣರು ಅದಕ್ಕೆ ಒಪ್ಪಲಿಲ್ಲ. ಈ ಬಗೆಯ ಮನೆತನಗಳು ಈ ಊರಲ್ಲಿ ಎಂಟು ಹತ್ತು ಇರುತ್ತವೆ. ಈಗ ನಾವು ನಿರ್ವಾಹವಿಲ್ಲದೆ ಚರ್ಚಿಗೆ ಹೋಗುತ್ತೇವೆ. ಆದರೆ ಅಲ್ಲಿಯೂ ನಮಗೆ ಮನ್ನಣೆಯಿಲ್ಲ. ನಾವು ಇನ್ನೂ ಹಿಂದುಗಳಂತೆ ಮೂರ್ತಿಗಳ ಪೂಜೆಯನ್ನು ಮಾಡುತ್ತಿರುವದರಿಂದ ಮತ್ತು ಏಕಾದಶೀ, ಕೃಷ್ಣಾಷ್ಟಮೀ, ಶಿವರಾತ್ರಿ ಮೊದಲಾದ ಹಿಂದೂ ಜನರ ಹಬ್ಬಗಳನ್ನು ಮಾಡುತ್ತಿರುವದರಿಂದ ಕ್ರೈಸ್ತರಿಗೆ ನಮ್ಮನ್ನು ಕಂಡರೆ ಆಗುವದಿಲ್ಲ."

"ಈ ಊರಲ್ಲಿ ಹಿಂದೂ ಮಿಶನ್ ಇಲ್ಲವೇ? ನಿಮ್ಮನ್ನು ತಿರುಗಿ ಹಿಂದೂ ಧರ್ಮದೊಳಗೆ ಸೇರಿಸಿಕೊಂಡರೆ ನೀವು ಬರಲಿಕ್ಕೆ ಸಿದ್ಧರಿಲ್ಲವೇ?" ಎಂದು ಬಳವಂತನು ಹೇಳಿದನು.

"ಹಿಂದೂ ಧರ್ಮದೊಳಗೆ ನಮ್ಮನ್ನು ಸೇರಿಸಿಕೊಳ್ಳಲಿಕ್ಕೆ ಕೆಲವು ಸುಧಾರಕರು ಮಾತ್ರ ಒಪ್ಪುತ್ತಾರೆ. ಆದರೆ ಬ್ರಾಹ್ಮಣರು ತಮ್ಮ ಸಮಾಜದಲ್ಲಿ ಮೊದಲಿನಂತೆ ನಮ್ಮನ್ನು ಕರಕೊಳ್ಳುವದಿಲ್ಲ. ಹಿಂದೂ ಧರ್ಮದಲ್ಲಿ ಸೇರಿ ಶೂದ್ರರೆನಿಸಿಕೊಳ್ಳಬೇಕು; ಇಲ್ಲವೇ ಬೇರೊಂದು ಜಾತಿಯನ್ನೇ ನಿರ್ಮಾಣ ಮಾಡಿಕೊಳ್ಳಲಿಕ್ಕೆಬೇಕು. ಅದಕ್ಕಿಂತ ಇದ್ದದ್ದೇನು ಕೆಟ್ಟಿಂದು ನಾವು ಹಾಗೇ ಉಳಿದಿದ್ದೇವೆ" ಎಂದು ಆ ಮುದುಕನು ಬಹಳ ಉದ್ವೇಗದಿಂದ ಹೇಳಿದನು.

ಆಗಂತುಗಳು ಈ ಸಮಾಚಾರವನ್ನು ಕೇಳಿ ವಿಚಾರಪರವಶರಾಗಿ ಸುಮ್ಮನೆ ನಿಂತುಬಿಟ್ಟರು.

"ಬನ್ನಿ, ಸ್ವಾಮಿ ಒಳಗೆ ಬನ್ನಿ, ಕೂತುಕೊಳ್ಳಿ ಎಷ್ಟು ಹೊತ್ತು

ನಿಂತುಕೊಂಡು ಮಾತಾಡುವವನು?" ಎಂದು ಹೇಳಿ ಮುದುಕನು ಮೂಲೆಯಲ್ಲಿದ್ದ ಒಂದು ಚಾಪೆಯನ್ನು ಹಾಸಿದನು. ಇಬ್ಬರೂ ಅತಿಥಿಗಳೂ ಅದರ ಮೇಲೆ ಕೂತುಕೊಂಡರು. ಸ್ವಲ್ಪ ಹೊತ್ತು ಎಲ್ಲರೂ ಸುಮ್ಮನೆ ಇದ್ದರು. ಬಳವಂತರಾಯನು ಮೊದಲು ನಿಶ್ಶಬ್ದತೆಯನ್ನು ಮುರಿದನು.

"ನೋಡಿದಿಯಾ, ರಾಮೂ, ಹಿಂದೂ ಜನರ ಜಾತಿಭೇದವೂ ದುರಭಿಮಾನವೂ ಹೀಗೆ ಹಿಂದೂ ಧರ್ಮದ ಹ್ರಾಸಕ್ಕೆ ಕಾರಣವಾಗಿವೆ! ಈ ಮುದುಕನು ಹೇಳಿದ ರೀತಿಯಿಂದ ಬೇಕಾದ ಹಿಂದುವನ್ನು ಮುಸಲ್ಮಾನನ್ನಾಗಲಿ, ಕ್ರೈಸ್ತನನ್ನಾಗಲಿ ಮಾಡಬಹುದು. ಎಷ್ಟೋ ಧರ್ಮಾಂತರಗಳು ಇದೇ ಪ್ರಕಾರದ ಹುಚ್ಚುತನದಿಂದಾಗಲಿ ದುರಾಶೆಯಿಂದಾಗಲಿ ಆಗುತ್ತವೆಂದು ಜನರು ಆಡುಕೊಳ್ಳುತ್ತಿರುವರು. ಅದರಲ್ಲಿ ಎಷ್ಟೋ ತಥ್ಯಾಂಶವಿರಲಿಕ್ಕೆಬೇಕು."

ರಾಮರಾಯ—"ಇಷ್ಟು ಸುಲಭವಾಗಿ ಹಿಂದುತ್ವವು ನಾಶವಾಗುತ್ತಿದ್ದರೆ ಪರಧರ್ಮೀಯರಾದರೂ ಏಕೆ ಸುಮ್ಮನೆ ಬಿಡಬೇಕು? ತಮ್ಮ ಧರ್ಮವೇ ಶ್ರೇಷ್ಠವೆಂದು ಅವರಿಗೆ ಅನಿಸುವದು ಸ್ವಾಭಾವಿಕವದೆ."

ಬಳವಂತರಾಯ—"ಈ ಧರ್ಮವು ಆ ಧರ್ಮಕ್ಕಿಂತ ಹೆಚ್ಚಿನದೆಂಬ ಮನವರಿಕೆಯಾಗಿ ಧರ್ಮಾಂತರವಾದರೆ ಅದಕ್ಕೆ ನನ್ನದೇನೂ ಅಡ್ಡಿಯಿಲ್ಲ. ಆದರೆ ಹೀಗೆ ವಾಮಮಾರ್ಗಗಳಿಂದ ಧರ್ಮಾಂತರಕ್ರಿಯೆಯು ನಡೆದರೆ ಅದನ್ನು ನಾವು ವಿರೋಧಿಸಲಿಕ್ಕೆಬೇಕು."

ರಾಮರಾಯ—"ಆಗಲೆಪ್ಪಾ ನೀನು ವಿರೋಧಿಸು. ನಿನ್ನೊಬ್ಬನಿಂದ ಏನಾಗುತ್ತದೆ? ಎಲ್ಲ ಹಿಂದುಗಳೂ ಈ ವಿಷಯದಲ್ಲಿ ಉದಾಸೀನರಾಗಿದ್ದಾರೆ. ನಿನಗೆ ಕಾಣುವದಿಲ್ಲವೇ?"

ಬಳವಂತರಾಯನು—"ಅವರು ಉದಾಸೀನರಾಗಿರುವದೂ ನಿಜ. ಕೆಲವರು ನಿಜ ಸ್ಥಿತಿಯ ಬಗ್ಗೆ ಅಜ್ಞಾನಿಗಳಿರುವದೂ ನಿಜ. ಆದ್ದರಿಂದಲೇ ನಾವು ಈ ವಿಷಯವಾಗಿ ಬರೆದು, ವ್ಯಾಖ್ಯಾನಗಳನ್ನು ಕೊಟ್ಟು ಜನರ ಕಣ್ಣು ತೆರೆಯಲಿಕ್ಕೆಬೇಕು."

ರಾಮರಾಯ—"ನಿನ್ನ ಕೆಲಸವು ಗುಡ್ಡಕ್ಕೆ ಕಲ್ಲು ಹೊತ್ತ ಹಾಗೆ. ವೈದಿಕರೂ ಧರ್ಮಗುರುಗಳೂ ನಿನ್ನ ಮಾತು ಕೇಳುವರೋ? ಯಾವದೇ ಕಾರಣ

ಬಿಡುತ್ತಾರೆ. ಎಷ್ಟೋ ಸಾರೆ ಸ್ನಾನ ಮಾಡುವಾಗ ಇದ್ದಲಿಗಳೂ ಎಲಬು ಗಳೂ ಬರಬಹುದು.

ನಮ್ಮ ಜನರು ಕಾಶಿಯಲ್ಲಿ ಶೇಟಜಿಯವರ ಅಪ್ತನಾದ ನಗೀನದಾಸ ನೆಂಬ ಶ್ರೀಮಂತ ವ್ಯಾಪಾರಸ್ಥನ ಮನೆಯಲ್ಲಿ ಬಿಡಾರ ಮಾಡಿದರು. ಅವನು ಇವರೆಲ್ಲರನ್ನು ಬಹಳ ಆದರದಿಂದ ಸತ್ಕರಿಸಿದನು. ಅವನ ಹೆಂಡತಿ ಕಸ್ತೂರ ಬಾಯಿಯು ನಮ್ಮ ಯಾತ್ರಿಕರಿಗೆ ಅಡಿಗೆಗೆ ಪ್ರತ್ಯೇಕ ಸ್ಥಳವನ್ನೂ ಪಾತ್ರೆ ಗಳನ್ನೂ ಕೊಟ್ಟಳು. ನಗೀನದಾಸನ ವಿಶಾಲವಾದ ಸಭಾಮಂಡಪವೆಲ್ಲ ಬೈರಾಗಿಗಳಿಂದ ತುಂಬಿ ಹೋಗಿತ್ತು. ಕಾಶಿಯಲ್ಲಿ ನಾಲ್ಕುನೂರು ಛತ್ರ ಗಳಿದ್ದರೂ ನಗೀನದಾಸನು ಬೈರಾಗಿಗಳಾಗಿ ತನ್ನದೊಂದು ಬೇರೆ ಅನ್ನಛತ್ರ ನನ್ನಿಟ್ಟಿದ್ದನು. ಬೈರಾಗಿಗಳು ಗಾಂಜಿ ಭಾಂಗ ಮೊದಲಾದ ಮಾದಕ ದ್ರವ್ಯ ಗಳನ್ನು ಸೇವಿಸುವದಕ್ಕೇನೂ ಕಡಿಮೆಯಿದ್ದಿಲ್ಲ. ಇಂಥವರಿಗೆ ಅನ್ನದಾನ ಮಾಡುವದು ಯೋಗ್ಯವೋ ಎಂಬ ಬಗ್ಗೆ ನಗೀನದಾಸನಿಗೂ ಬಳವಂತರಾಯ ನಿಗೂ ಬಹಳ ಚರ್ಚೆಯಾಯಿತ್ತು. "ಇಂಥ ಉಡಾಳರಾದ, ವ್ಯಸನಾಧೀನ ರಾದ, ಕಳವು ಮಾಡಲಿಕ್ಕೆ ಹೇಸದ ಬೈರಾಗಿಗಳಿಗೆ ಅನ್ನ ಹಾಕುವದಕ್ಕಿಂತ ಒಂದು ಉದ್ಯೋಗ ಶಾಲೆಯನ್ನು ಸ್ಥಾಪಿಸುವದಕ್ಕೆ ನಿನ್ನ ದುಡ್ಡನ್ನು ವೆಚ್ಚ ಮಾಡಿದರೆ ದೇಶದೊಳಗಿನ ಬಡಬರಿಗೆ ಅನ್ನದ ಮಾರ್ಗವನ್ನು ಮಾಡಿ ಕೊಟ್ಟಂತಾಗುವದು" ಎಂದು ಬಳವಂತರಾಯನು ಅವನ ಮನಸ್ಸಿನ ಮೇಲೆ ಬಿಂಬಿಸಿದನು. ಬಳವಂತರಾಯನ ಅಂತಃಕರಣಪೂರ್ವಕವಾದ, ಎದೆಯನ್ನು ಕರಗಿಸುವ ಮಾತುಗಳಿಂದ ನಗೀನದಾಸನ ಮನಸ್ಸಿನ ಮೇಲೆ ಒಳ್ಳೇ ಪರಿ ಣಾಮವಾಗಿ ಅವನು ಶೀಘ್ರವೇ ಆ ವಿಚಾರವನ್ನು ಕೃತಿಯಲ್ಲಿಳಿಸುವದಕ್ಕೆ ಅಭಿವಚನ ಕೊಟ್ಟನು.

ಬಳವಂತರಾಯನು ಶ್ರಾದ್ಧಕ್ಕಾಗಿ ಒಬ್ಬ ಪಂಡ್ಯಾನ ಮನೆಗೆ ಹೋದನು. ಕಾಶಿಯಲ್ಲಿ ಕನಿಷ್ಠ ಪಕ್ಷಕ್ಕೆ ಹನ್ನೊಂದು ಶ್ರಾದ್ಧಗಳನ್ನು ಮಾಡಲೇ ಬೇಕೆಂದು ಆ ಪಂಡ್ಯಾನು ಬಳವಂತರಾಯನಿಗೆ ಬಹಳ ರೀತಿಯಿಂದ ಹೇಳಿ ನೋಡಿದನು. ಆದರೆ ಬಳವಂತರಾಯನು ಮಾತ್ರ ಹಣಿಯಲಿಲ್ಲ.

ಇಲ್ಲಿಯಾದರೂ ಪಂಡ್ಯಾ ಜನರದು ಅದೇ ಕಾಯಕ-ಭಾವಿಕರ ಅಂಧ ಶ್ರದ್ಧೆಯ ಮೇಲೆ ಕೈಯಾರಿ ಅವರಿಂದ ಆದಷ್ಟು ದುಡ್ಡನ್ನು ಸೆಳೆದುಕೊಳ್ಳು

ವಸು. ಈ ವೃತ್ತಿಯಿಂದ ಅವರು ಶ್ರೀಮಂತರಾಗಿ ದೊಡ್ಡ ದೊಡ್ಡ ವಾಡೆಗಳನ್ನು ಕಟ್ಟಿಸಿಕೊಂಡು ಸಿರಿಗಂತಿಕೆಯ ಎಲ್ಲ ವಿಲಾಸಗಳಲ್ಲಿಯೂ ಲೋಲಾಡುವರು.

ಶ್ರಾದ್ಧವು ಮುಗಿದ ದಿವಸವೇ ನಮ್ಮ ಜನರು ವಿಶ್ವೇಶ್ವರನ ದೇವಸ್ಥಾನಕ್ಕೆ ಹೋಗಿ ದೇವರ ದರ್ಶನವನ್ನು ತೆಗೆದುಕೊಂಡರು. ಈ ದೇವಸ್ಥಾನದಲ್ಲಿ ಯಾವಾಗಲೂ ಹೋಗುವ ಬರುವ ಜನರ ವಿಪರೀತ ಗಲಾಟೆ. ಗರ್ಭಾಗಾರದಲ್ಲಿ ಮಾತ್ರ ಹವೆ, ಬೆಳಕು, ಅನುಕೂಲತೆ ವ್ಯವಸ್ಥೆಯಾಗಿದೆ. ದಕ್ಷಿಣ ದೇಶದ ಗುಡಿಗಳಂತೆ ಗರ್ಭಗುಡಿಯಲ್ಲಿ ಕತ್ತಲು ಇರುವದಿಲ್ಲ.

ಮಹಾ ದ್ವಾರದಲ್ಲಿ ಮಾತ್ರ ಎಷ್ಟೋ ತಿರುಕರ ಸಾಲುಗಳು. ಯಾತ್ರಿಕರು ಬಂದ ಕೂಡಲೆ ತಿರುಕರು ನಡೆಯಿಸುವ ಕೋಲಾಹಲವನ್ನು ಕೇಳಲಾಸಲ್ಲ. ದೀನರಲ್ಲಿಯೂ ದರಿದ್ರರಲ್ಲಿಯೂ ಯಾವನು ದೇವರ ಅಸ್ತಿತ್ವವನ್ನು ಕಾಣುವನೋ ಅವನಿಗೇ ಕಾಶೀ ವಿಶ್ವೇಶ್ವರನು ಪ್ರಸನ್ನನಾಗಿ ವರವನ್ನೀಯುವನೆಂಬ ಮಾತನ್ನು ಯಾತ್ರಿಕರಿಗೆ ಪದೇ ಪದೇ ನೆನಪು ಕೊಡುವದೇ ದೇವರ ಸಂಕಲ್ಪವಿರಬಹುದು

ಶ್ರೀ ವಿಶ್ವೇಶ್ವರನ ದರ್ಶನಪೂಜನಗಳಾದ ಮೇಲೆ ನಮ್ಮ ಮಂಡಲಿಯು ಬಿಂದು ಮಾಧವ, ಅನ್ನಪೂರ್ಣಾ, ಶುಕದೇವ ಮುಂತಾದ ಅನೇಕ ದೇವಸ್ಥಾನಗಳಿಗೆ ಹೋಗಿ ದೇವರ ದರ್ಶನ ತೆಗೆದುಕೊಂಡರು. ಕೌದೇವಿಯ ದೇವಸ್ಥಾನಕ್ಕೆ ಹೋಗಬೇಕಾದರೆ ಗಂಗಾ ನದಿಯೊಳಗೆ ಡೋಣಿಯೊಳಗೆ ಹೋಗಬೇಕಾಗುತ್ತದೆ. ಡೋಣಿಯಲ್ಲಿ ಕೂತು ಹೋಗುವಾಗ, ಗಂಗಾ ಪ್ರವಾಹದೊಳಗೆ ದಂಡೆಯ ಮೇಲಿನ ಎತ್ತರವಾದ ಕಟ್ಟಡಗಳ ಪ್ರತಿಬಿಂಬವು ಬಿದ್ದು ಸೂರ್ಯಪ್ರಕಾಶದಲ್ಲಿ ಕುಣಿಯುವದನ್ನು ಯಾತ್ರಿಕರು ನೋಡಿ ಆಹ್ಲಾದಪಡಬಹುದು. ಗುಡಿಯನ್ನು ನೋಡಿದರೆ ಅಷ್ಟೇನೂ ಪ್ರೇಕ್ಷಣೀಯವಲ್ಲ. ಆದರೆ ಅಲ್ಲಿಗೆ ಹೋಗಬೇಕಾದರೆ ಹಾದಿಯಲ್ಲಿ ಕಾಣುವ ಸೃಷ್ಟಿಶೋಭೆಗೆ ಮಾತ್ರ ಬೆಲೆಯಿಲ್ಲ.

ಪ್ರತಿಯೊಂದು ಕ್ಷೇತ್ರದಲ್ಲಿ ಇಂಥದೊಂದು ಸ್ಥಾನಕ್ಕೆ ಹೋಗಿ ಬರದ ಹೊರತು ಯಾತ್ರೆಯ ಫಲವು ಬರುವದಿಲ್ಲೆಂದು ಜನರು ಹೇಳುವದುಂಟು. ಅಂಥ ಸ್ಥಳಕ್ಕೆ ಹೋಗಿ ನೋಡಲಾಗಿ ಅಪೂರ್ವವಾದ ಸೃಷ್ಟಿಸೌಂದರ್ಯ

ವಾಗಲಿ ಅನುಪಮವಾದ ಶಿಲ್ಪಕಲಾಕೌಶಲ್ಯಗಳಾಗಲಿ ನೋಡುಗರ ಕಣ್ಣಿಗೆ ಗೋಚರವಾಗುವವು. ನಮ್ಮ ದೇಶದ ಎಲ್ಲ ಕ್ಷೇತ್ರಗಳು ಸೃಷ್ಟಿದೇವತೆಯ ಸೊಬಗಿನ ಸುಗ್ಗಿ ಇದ್ದ ಸ್ಥಳಗಳಲ್ಲಿಯೇ ಸ್ಥಾಪಿತವಾಗಿರುವುದಾಗಿ ಕಂಡು ಬರುವದು. ಮಾನವಬುದ್ಧಿಕೌಶಲದ ಸಾಕ್ಷಿಯನ್ನು ಕೊಡುವ ಭವ್ಯವಾದ ಕಟ್ಟಡಗಳೂ ಕಟೆದ ಚಿತ್ರಗಳೂ ಅಲ್ಲಿ ಬಹುಶಃ ಕಂಡುಬರುವವು. ನಾವು ತೀರ್ಥಯಾತ್ರೆಗೆ ಹೋಗುವದು ಮುಖ್ಯತಃ ಇಂಥ ಸೌಂದರ್ಯದ ಇಲ್ಲವೆ ಭವ್ಯತೆಯ ನಮೂನೆಗಳನ್ನು ಉಣ್ಣಲಿಕ್ಕೆ; ಬೇರೆ ಬೇರೆ ಪ್ರಾಂತಗಳ ಜನರ ರೀತಿ ನೀತಿಗಳನ್ನು ನಿರುಕಿಸಿ ನಮ್ಮ ಮನಸ್ಸನ್ನೂ ಹೃದಯವನ್ನೂ ವಿಶಾಲಗೊಳಿಸಲಿಕ್ಕೆ; ವಿಶ್ವಬಂಧುತ್ವದ ಕನಸನ್ನು ವಾಸ್ತವದಲ್ಲಿ ಕಾಣಲಿಕ್ಕೆ. ಧರ್ಮಸಂರಕ್ಷಕರಾದ ಜನರು ಇಂಥ ಉದ್ದೇಶಗಳನ್ನು ಮರೆತು ಪಂಡಾ ಜನರ ಹಿಡಿತದೊಳಗೆ ಸಿಲುಕಿ, ಕೊಳೆಯುಳ್ಳ ಪುಷ್ಕರಣಿಗಳಲ್ಲಿ ಸ್ನಾನ ಮಾಡಿ ಅನೇಕ ಶ್ರಾದ್ಧಗಳ ಜಂಜಾಟದೊಳಗೆ ಶಿಕ್ಕು, ತಮ್ಮ ದುಡ್ಡನ್ನೂ ಆಯುಷ್ಯವನ್ನೂ ನಿರರ್ಥಕವಾಗಿ ಕಳೆದುಕೊಂಡು ಗಾಸಿಯಾಗುವರು. ತೀರ್ಥಯಾತ್ರೆಯು ಜನಸಾಮಾನ್ಯರಿಗೆ ಎಂದು ಶಿಕ್ಷಣಸಾಧನವಾಗುವದೋ ಅಂದು ಭಾಗ್ಯದ ದಿನವು ಉದಯಿಸುವದು.

ಮುಂದೆ ನಮ್ಮ ಯಾತ್ರಿಕಮಂಡಲಿಯು ಗಯಾ ಕ್ಷೇತ್ರಕ್ಕೆ ಹೋಗಿ ವಿಷ್ಣುಪಾದವನ್ನೂ ವಟವೃಕ್ಷವನ್ನೂ ಸಂದರ್ಶಿಸಿದರು. ಅಲ್ಲಿ ಬಳವಂತ ರಾಯನು ಒಂದು ಶ್ರಾದ್ಧ ಮಾಡಿ ವಿಷ್ಣುಪಾದದ ಮೇಲೆ ಪಿಂಡವನ್ನು ಹಾಕಿದನು. ಭಾವಿಕ ಜನರು ಶ್ರಾದ್ಧವನ್ನು ಮುಗಿಸಿ ಸಾಲಾಗಿ ಕೂತಿರಲು ಗಯಾವಾಳನು ಶ್ರೀಮಂತಿಕೆಯ ಅಟ್ಟಹಾಸದಿಂದ ಅಲ್ಲಿಗೆ ಬಂದು ಪ್ರತಿಯೊಬ್ಬ ಭಾವಿಕನಿಂದ ಅದಷ್ಟು ದಕ್ಷಿಣೆಯನ್ನು ಎತ್ತಿಕೊಂಡು 'ತೆರೆ ಪಿತರ ಸ್ವರ್ಗಕು ಗಯೆ' ಎಂದು ಆಶ್ವಾಸನವನ್ನು ಕೊಟ್ಟು ರಥದಲ್ಲಿ ಕೂತು ತನ್ನ ವಾಡೆಗೆ ಹೋಗುವದನ್ನು ನಮ್ಮ ಯಾತ್ರಿಕ ಮಂಡಲಿಯು ನೋಡಿ "ಸ್ವರ್ಗವು ದುಡ್ಡು ಕೊಟ್ಟವರಿಗೆ ಮಾತ್ರ ಸುಲಭವಾಗಿದೆ" ಎಂದು ಅಂದುಕೊಂಡರು.

ಇಷ್ಟರಲ್ಲಿ ಉತ್ತರ ದೇಶದ ಹವೆಯಿಂದ ರಾಮರಾಯನ ಮಗನಾದ ಮಾಧವನ ಪ್ರಕೃತಿಯು ಅಸ್ವಸ್ಥವಾಯಿತು. ಅಪ್ಪಾಸಾಹೇಬನ ಕಾರಕೂನನೂ ರೈತರಿಂದ ಕಂದಾಯದ ವಸೂಲಿಯ ಬಗ್ಗೆ ತ್ರಾಸವಾಗಿದ್ದರಿಂದ

ತೀವ್ರ ಬರಬೇಕೆಂದು ಪತ್ರ ಬರೆದನು. ಅದ್ದರಿಂದ ಬಳವಂತರಾಯನು ಅಪ್ಪಾಸಾಹೇಬನನ್ನು ಎಲ್ಲ ಹೆಂಗಸರನ್ನು ಚಂದ್ರಪುರಕ್ಕೆ ಕಳಿಸಿಕೊಟ್ಟು ರಾಮರಾಯನೊಂದಿಗೆ ಇನ್ನು ಕೆಲವು ಕ್ಷೇತ್ರಗಳನ್ನು ನೋಡಬೇಕೆಂತಲೂ ಸಾಧ್ಯವಾದರೆ ಹಿಮಾಲಯದೊಳಗೆ ತಿರುಗಾಡಬೇಕೆಂತಲೂ ಯೋಜನೆ ಮಾಡಿದರು.

---

## ೧೧

## ಇವನು ಬ್ರಾಹ್ಮಣನೋ? ಕ್ರೈಸ್ತನೋ?



ಅಪ್ಪಾಸಾಹೇಬನು ತನ್ನ ಪತ್ನಿಯೊಂದಿಗೆ ನೆಟ್ಟಗೆ ಮನಸೂರಿಗೆ ಬಂದು ತನ್ನ ರೈತರ ವಸೂಲಿಯ ಜಗಳವನ್ನು ಬಹಳ ಸಹೃದಯತೆಯಿಂದ ತೀರಿಸಿಕೊಂಡನು. ಆ ಮೇಲೆ ಮತ್ತೆ ಚಂದ್ರಪುರಕ್ಕೆ ಬಂದು ಬಳವಂತರಾಯನ ಹೇಳಿಕೆಯ ಪ್ರಕಾರ ಗೋಶಾಲೆಯ ಕೆಲಸವನ್ನು ನೋಡಹತ್ತಿದನು. ಶಾರದೆಯೂ ರಾಧಾಬಾಯಿಯೂ ಬಳ್ಳಾರಿಗೆ ಹೋಗಿ ನಾರಾಯಣರಾಯನನ್ನು ಕೂಡಿಕೊಂಡರು. ಇವರೆಲ್ಲರೂ ಬಂದಿದ್ದರಿಂದ ಮನೆಯಲ್ಲಿ ಸಣ್ಣ ಮಕ್ಕಳ ಚಿಂತೆಯು ದೂರವಾಗಿ ನಾರಾಯಣರಾಯನಿಗೆ ತನ್ನ ವೈದ್ಯಕದ ಉದ್ಯೋಗಕ್ಕೆ ಬಹಳ ಅನುಕೂಲವಾಯಿತು. ಮಾಧವನೂ ನಾರಾಯಣರಾಯನ ಔಷಧೋಪಚಾರದಿಂದ ಬೇಗನೆ ನೆಟ್ಟಗಾಗಿ ಸುಖದಿಂದ ಆಡಿಕೊಂಡು ಇರಹತ್ತಿದನು.

ಇತ್ತ ಬಳವಂತರಾಯನೂ ರಾಮರಾಯನೂ ಮುಂದೆ ಅಯೋಧ್ಯೆಗೆ ಹೋದರು. ಅಯೋಧ್ಯೆಯಲ್ಲಿ ಪ್ರೇಕ್ಷಣೀಯವಾದ ಸ್ಥಳಗಳು ವಿಶೇಷವಾಗಿ ಇರದಿದ್ದರೂ ಅದೊಂದು ಇತಿಹಾಸ-ಪ್ರಸಿದ್ಧವಾದ ಪಟ್ಟಣವೆಂದು ಅವರು ಅಲ್ಲಿಗೆ ಹೋದದ್ದು.

ಅಯೋಧ್ಯೆಯಲ್ಲಿ ಮಾತ್ರ ಕೀಟಜಿಯವರ ಪರಿಚಯದವರಾರೂ ಇಲ್ಲ

ದಿಂದಾಗಲಿ ಹಿಂದುವು ತನ್ನ ಧರ್ಮವನ್ನು ಬಿಟ್ಟು ಮುಸಲ್ಮಾನನಾಗಲಿ, ಕ್ರೈಸ್ತನಾಗಲಿ, ಆದರೆ, ತಿರುಗಿ ಯಾವ ಪ್ರಾಯಶ್ಚಿತ್ತದಿಂದಲೂ ಅವನನ್ನು ತಿರುಗಿ ಹಿಂದೂ ಧರ್ಮದೊಳಗೆ ತೆಗೆದುಕೊಳ್ಳಲಿಕ್ಕೆ ಬರಲಾರದೆಂದು ಹಟ ಹಿಡಿಯುವ ಧರ್ಮಭ್ರಾಂತರ ಮುಂದೆ ನಿನ್ನ ಉಪನ್ಯಾಸವೆಲ್ಲ ಅರಣ್ಯರೋದನವೇ ಸರಿ."

ಬಳವಂತರಾಯ— "ಈ ಹಟವನ್ನೇ ನನಗೆ ವಿರೋಧಿಸಬೇಕಾಗಿದೆ. ಕ್ಷುಲ್ಲಕ ಕಾರಣಗಳಿಂದ ಹೊರಟು ಹೋಗಲಿಕ್ಕೆ ನಮ್ಮ ಹಿಂದುತ್ವವೇನು ನಾವು ಮೈಗೆ ಹಚ್ಚಿಕೊಂಡ ಬಣ್ಣವೇ? ಸಾವಿರಾರು ವರ್ಷಗಳ ಸಂಸ್ಕಾರಗಳಿಂದ ನಮ್ಮ ರಕ್ತದಲ್ಲಿ ಬೆರೆತು ಹೋಗಿರುವ ಹಿಂದುತ್ವವು ಅನ್ಯ ಧರ್ಮೀಯರ ಸಂಗದ ಅನ್ನೋದಕವನ್ನು ಸೇವಿಸುವದರಿಂದ ನಾಶವಾಗುವದು ಅಸಂಭವವು. ಹೀಗೆ ಯಾರು ತಿಳಿಯುತ್ತಾರೋ ಅವರ ಹಿಂದುತ್ವದಲ್ಲಿ ಏನೂ ಹುರುಳಿಲ್ಲ; ಅದಕ್ಕೆ ಏನೂ ಬೆಲೆಯಿಲ್ಲ. ನಾನು ಏನು ಪಾಪ ಮಾಡಿದರೂ ಎಲ್ಲಿಯತನಕ ನನಗೆ ಹಿಂದೂ ಧರ್ಮದ ಮೇಲೆ ವಿಶ್ವಾಸವಿದೆಯೋ ಅಲ್ಲಿಯತನಕ ನಾನು ಹಿಂದುವೇ. ನನ್ನ ಹಿಂದುತ್ವವನ್ನು ಯಾರೂ ಕಸಿದುಕೊಳ್ಳಲಾರರು. ಹಿಂದೂ ಧರ್ಮತತ್ವಗಳನ್ನು ನಾನು ಎಂದು ಅಲ್ಲಗಳೆಯುವೆನೋ ಅಂದೇ ನನ್ನ ಹಿಂದುತ್ವವು ಅಡಗುವದು." ಎಂದು ಬಹಳ ವಿಚಾರದ ರಭಸದಿಂದ ನುಡಿದನು.

ರಾಮರಾಯ— "ಹಾಗಾದರೆ ಕ್ಷುಲ್ಲಕ ಕಾರಣಗಳಿಂದ ಪರಧರ್ಮದಲ್ಲಿ ಸೇರ್ಪಡೆಯಾದವರ ಗತಿಯೇನು? ಅವರು ಏನು ಮಾಡಬೇಕು?"

ಬಳವಂತರಾಯ— "ಹಿಂದೂ ಧರ್ಮದ ಮೇಲಿನ ಅವರ ವಿಶ್ವಾಸವು ಇನ್ನೂ ನಿಶ್ಚಲವಾಗಿದ್ದರೆ, ಅವರು ಹಿಂದುಗಳೆಂದೇ ತಿಳಿಯಲಿಕ್ಕೆ ಏನೂ ಅಡ್ಡಿಯಿಲ್ಲ. ಅವರಿಂದ ಏನಾದರೂ ಪಾಪಗಳಾಗಿದ್ದರೆ ಆ ಪಾಪಕ್ಷಾಲನೆಗಾಗಿ ಅವರಿಗೆ ಸಮರ್ಪಕವಾದ ಪ್ರಾಯಶ್ಚಿತ್ತವನ್ನು ಕೊಡಬಹುದು. ಆ ಪ್ರಾಯಶ್ಚಿತ್ತವು ಮಾತ್ರ ಅವರ ಶಕ್ತಿಯನ್ನು ಮೀರಬಾರದು; ಅದು ಅವರ ಪಶ್ಚಾತ್ತಾಪದ ಸಾಕ್ಷಿಯಾದರೆ ಸಾಕು."

ರಾಮರಾಯ— "ಕ್ರೈಸ್ತರಂತೆ ಅಥವಾ ಮುಸಲ್ಮಾನರಂತೆ ಹಿಂದೂ

ಜನರೂ ತಮ್ಮ ಧರ್ಮಾನುಯಾಯಿಗಳ ಸಂಖ್ಯೆಯನ್ನು ಹೆಚ್ಚಿಸಲಿಕ್ಕೆ ಪ್ರಯತ್ನ ನಡೆಯಿಸಬೇಕೆಂದು ನಿನ್ನ ಮತವೋ ?"

ಬಳವಂತರಾಯ– "ಪರಧರ್ಮೀಯರನ್ನು ಹೊಸದಾಗಿ ಹಿಂದೂ ಧರ್ಮದೊಳಗೆ ಸೇರಿಸಿಕೊಳ್ಳಲಿಕ್ಕೆ ನಮ್ಮ ಸಂಘದ ಪ್ರಯತ್ನವು ಬೇಕಾಗಿಲ್ಲ. ಆದರೆ ಯಾರು ಅಜ್ಞಾನದಿಂದಾಗಲಿ, ಬಲುಮೆಯಿಂದಾಗಲಿ, ನಮ್ಮ ಧರ್ಮವನ್ನು ಬಿಟ್ಟು ಅನ್ಯಧರ್ಮದಲ್ಲಿ ಸೇರಿಕೊಂಡಿರುವರೋ ಅವರಿಗೆ ಮಾತ್ರ ಸ್ವೇಚ್ಛೆಯಿಂದ ಹಿಂದೂಧರ್ಮದಲ್ಲಿ ಬರಲಿಕ್ಕೆ ಮುಕ್ತದ್ವಾರವಿರಬೇಕೆಂಬುದಷ್ಟೇ ನನ್ನ ಮತವು. ಅಂಥವರಿಗೆ ತಿರುಗಿ ನಮ್ಮೊಳಗೆ ಕರೆದುಕೊಳ್ಳಲಿಕ್ಕೆ ಅನುಕೂಲವಾಗುವಂತೆ ನಾವು ಒಂದು ಹಿಂದೂ ಮಿಶನ್ ಅಂದರೆ ಧರ್ಮ ಸಂರಕ್ಷಕ ಸಂಘವನ್ನು ಸ್ಥಾಪಿಸಲಿಕ್ಕೆಬೇಕು. ಉದಾಹರಣಾರ್ಥವಾಗಿ ಈ ಮುದುಕನನ್ನೇ ನೋಡು. ಇವನು ಜನಗಣನೆಯ ಲೆಕ್ಕಕ್ಕೆ ಮಾತ್ರ ಕ್ರೈಸ್ತನು; ಅಂತಃಕರಣದಿಂದ ಇನ್ನೂ ಹಿಂದುವೇ. ಆದ್ದರಿಂದ ಇಂಥವರನ್ನು ನಾವು ಆನಂದದಿಂದ ಒಳಗೆ ಕರೆದುಕೊಳ್ಳಲಿಕ್ಕೆಬೇಕು. ಇಲ್ಲದಿದ್ದರೆ ನಮ್ಮ ಹಿಂದೂ ಧರ್ಮವು ಕೆಲವು ವರ್ಷಗಳಲ್ಲಿ ನಾಮಶೇಷವಾಗಿ ಹೋಗಬಹುದು"

ಈ ಚರ್ಚೆಯನ್ನು ಮುದುಕನು ಒಮ್ಮನಸ್ಸಿನಿಂದಲೂ ಅತ್ಯಾದರದಿಂದಲೂ ಕೇಳುತ್ತಿದ್ದನು. ಆಗಂತುಗಳು ಮಾತಿನ ಭರದಲ್ಲಿ ತಮ್ಮ ನೀರಡಿಕೆಯನ್ನೇ ಮರೆತು ಕೂತದ್ದನ್ನು ನೋಡಿ "ಸ್ವಾಮಿನಾ, ನಿಮ್ಮ ವಿಶಾಲವಾದ ಮನಸ್ಸನ್ನೂ ಉದಾರವಾದ ಹೃದಯವನ್ನೂ ನೋಡಿ ನನಗೆ ತಿಳಿಸಲಾರದಷ್ಟು ಹಿಗ್ಗು ಆಗಿದೆ. ಆದರೆ ನೀವು ನೀರಡಿಕೆಯನ್ನೇ ಮರೆತುಬಿಟ್ಟಿರುವಿರಲ್ಲ! ನೀವು ನೀರು ಕುಡಿದು ಮಾತಾಡಬಹುದು." ಎಂದು ಹೇಳಿ ಸ್ವಲ್ಪ ಸಕ್ಕರೆಯನ್ನೂ ನೀರನ್ನೂ ತಂದುಕೊಟ್ಟನು. ಆಗಂತುಗಳು ಸಕ್ಕರೆಯನ್ನು ತಿಂದು ನೀರನ್ನು ಕುಡಿದು ಹೊರಡಲಿಕ್ಕೆ ಸಿದ್ಧರಾದರು. ಆಗ ಮುದುಕನು ಅವರನ್ನು ಒಳಗೆ ಕರೆದುಕೊಂಡು ಹೋಗಿ ತನ್ನ ದೇವರ ಮನೆಯನ್ನು ತೋರಿಸಿದನು. ಅಲ್ಲಿ ಮಂಟಪದೊಳಗೆ ರಾಮಕೃಷ್ಣರ ಮೂರ್ತಿಗಳೂ ಪಾರ್ವತಿ ಶಂಕರ ಪ್ರತಿಮೆಗಳೂ ಹಿಂದೂ ಸಾಧುಸಂತರ ಚಿತ್ರಪಟಗಳೂ ಇದ್ದವು. ದೇವರಿಗೆ ಆ ದಿವಸ ಪೂಜೆ ಮಾಡಿದ್ದರು. ಅವನ ಹೆಂಡತಿಯು ಒಬ್ಬ ಬ್ರಾಹ್ಮಣ ಸ್ತ್ರೀಯಂತೆ ಸೀರೆಯನ್ನುಟ್ಟು ಕುಪ್ಪಸವನ್ನು ತೊಟ್ಟು ಅಡಿಗೆ ಮಾಡುತ್ತಿ

ಸ್ಥಳು. ಮನೆಯ ಒಳಗೆಲ್ಲ ಬ್ರಾಹ್ಮಣರ ಮನೆಯಂತೆಯೇ ಎಲ್ಲ ವ್ಯವಸ್ಥೆಯಿತ್ತು. ಆ ಮೇಲೆ ಹೊರಡಬೇಕೆಂಬುವಷ್ಟರಲ್ಲಿ ಮುದುಕನು ಅವರಿಗೆ “ಸ್ವಾಮಿಗಳಾ, ಈಗ ಊಟದ ಹೊತ್ತಾಗಿದೆ. ನಮ್ಮ ಮನೆಯಲ್ಲಿಯೇ ಊಟ ಮಾಡಿ ಹೋಗಬಹುದಲ್ಲ. ತಮ್ಮ ಪಂಕ್ತಿ ಲಾಭದಿಂದ ನನ್ನ ಮನಸ್ಸಿಗೆ ಬಹಳ ಸುಖವಾದೀತು.” ಎಂದು ಬಹಳ ದೀನಭಾವದಿಂದ ಬೇಡಿಕೊಂಡನು. ಅತಿಥಿಗಳಿಗೆ ಅವನ ಮಾತಿಗೆ ಒಲ್ಲೆನ್ನಲಿಕ್ಕೆ ಆಗಲಿಲ್ಲ. ಅವನ ಮನೆಯಲ್ಲಿಯೇ ಸಂಧ್ಯಾವಂದನವನ್ನು ಮಾಡಿ ಯಾವ ಸಂಕೋಚವಿಲ್ಲದೆ ಊಟ ಮಾಡಿದರು. ಮುದುಕನ ಎದೆಯಲ್ಲಿ ಹಿಗ್ಗು ಹಿಡಿಸದಾಯಿತು. ಅವನು ಮೇಲಿಂದ ಮೇಲೆ ಅವರ ಉಪಕಾರ ಮನ್ನಿಸಿದನು. ಆ ಮೇಲೆ ಅವರಿಗೆ ಧರ್ಮಶಾಲೆಯ ಮಾರ್ಗವನ್ನು ತೋರಿಸುವದಕ್ಕಾಗಿ ಕಂದೀಲು ತಕ್ಕೊಂಡು ಹೊರಟನು. ಹೋಗುವಾಗ ಹಾದಿಯಲ್ಲಿ ಅವನು ಅತಿಥಿಗಳಿಗೆ—“ರಾಯರೇ, ತಾವು ಹಿಂದೂ ಮಿಶನ್ ಸ್ಥಾಪಿಸುವ ಮಾತನಾಡಿದಿರಿ. ಈ ಊರಲ್ಲಿ ಅನಾಥರಾದ ಎಷ್ಟೋ ಹಿಂದೂ ಬಾಲಬಾಲಿಕೆಯರನ್ನು ಕ್ರಿಶ್ಚನ್ನ ಮಿಶನ್‌ದವರು ಕರೆದುಕೊಂಡು ಹೋಗಿ ಅವರ ಪಾಲನ ಪೋಷಣ ಶಿಕ್ಷಣ ಮೊದಲಾದವುಗಳನ್ನು ಬಹಳ ಉತ್ತಮ ರೀತಿಯಿಂದ ಮಾಡುತ್ತಾರೆ. ಆದ್ದರಿಂದ ನೀವು ಇಲ್ಲಿಯ ‘ಕ್ರಿಶ್ಚನ್ ಮಿಶನ್’ ದ ಮಂದಿರಕ್ಕೆ ಹೋಗಿ ಅವರು ಮಾಡುವ ಕೆಲಸವನ್ನು ನೋಡಬೇಕು. ಅದು ನಿಮಗೆ ಎಷ್ಟೋ ಮಾರ್ಗದರ್ಶಕವಾಗಬಹುದು.” ಎಂದು ಸೂಚಿಸಿದನು.

ಬಳವಂತರಾಯನು—“ನಿಮ್ಮ ಸೂಚನೆಯು ಚನ್ನಾಗಿದೆ. ನಾಳೆ ಪ್ರಾತಃಕಾಲ ನಾವು ನಿಮ್ಮ ಮನೆಗೆ ಬರುವೆವು. ನೀವು ಕ್ರಿಶ್ಚನಾ ಮಿಶನ್ನದ ಮಂದಿರಕ್ಕೆ ನಮ್ಮನ್ನು ಕರೆದುಕೊಂಡು ಹೋಗುವಿರಾ?” ಎಂದು ಕೇಳಿದನು.

“ಆಗಬಹುದು. ನಾಳೆ ಅಗತ್ಯ ಬನ್ನಿ” ಎಂದು ಹೇಳಿ ಅವರನ್ನು ಧರ್ಮಶಾಲೆಗೆ ಮುಟ್ಟಿಸಿ ಮತ್ತೆ ಅವರ ಉಪಕಾರವನ್ನು ಮನ್ನಿಸಿ ಮನೆಗೆ ತಿರುಗಿದನು.

ಮರುದಿನ ಮುಂಜಾನೆ ಗೊತ್ತು ಮಾಡಿದಂತೆ ನಮ್ಮ ಪ್ರವಾಸಿಕರು ಆ ಮುದುಕನ ಮನೆಗೆ ಹೋದರು. ಅವನು ಅಷ್ಟರಲ್ಲಿಯೇ ಅವರ ಉಪ

ಹಾರದ ಸಿದ್ಧತೆಯನ್ನು ಮಾಡಿ ಅವರ ಹಾದಿ ನೋಡುತ್ತ ಕುಳಿತಿದ್ದನು. ಆ ಮುದುಕನು ಪ್ರೀತಿಯಿಂದ ಕೊಟ್ಟ ಫಲಾಹಾರವನ್ನು ಅವನ ಸಂಗಡ ಆನಂದದಿಂದ ಸವಿದು ಅವನನ್ನು ಕರೆದುಕೊಂಡು ಕ್ರಿಶ್ಚನ್-ಮಿಶನ್ನದ ದಾರಿಯನ್ನು ಹಿಡಿದರು.

ಮಿಶನ್ನದ ಮಂದಿರವು ಊರಹೊರಗೆ ಸ್ವಚ್ಛವಾದ ಸ್ಥಳದಲ್ಲಿತ್ತು. ಅದರ ಸುತ್ತಲೂ ಬೇಕಾದಷ್ಟು ವಿಸ್ತಾರವಾದ ಬೈಲು. ಮೊದಲು ಮಹಾದ್ವಾರದಿಂದ ಸ್ವಲ್ಪ ಮುಂದಕ್ಕೆ ಹೋದ ಕೂಡಲೆ ಮಿಶನ್‌ದ ಮುಖ್ಯ ಮಂದಿರವು. ಅದರಾಚೆಗೆ ಟೇನಿಸ್, ಬ್ಯಾಡ್-ಮಿಂಟನ್ ಮೊದಲಾದ ಆಟಗಳ ಅಂಗಣಗಳು; ಅವುಗಳಾಚೆಗೆ ಪ್ರಾರ್ಥನಾ ಮಂದಿರವು ಅದರಾಚೆಗೆ ದೂರದಲ್ಲಿ ವಸತಿಗೃಹಗಳು. ಮಂದಿರದ ಸುತ್ತಲೂ ಒಂದು ಸುಂದರವಾದ ಹೂದೋಟವು.

ಮುದುಕನು ಮಂದಿರದ ಆವಾರದೊಳಗೆ ಹೋಗದೆ ಅತಿಥಿಗಳನ್ನು ಅಲ್ಲಿಯತನಕ ಮುಟ್ಟಿಸಿ ಮಧ್ಯಾಹ್ನಕ್ಕೆ ತನ್ನ ಮನೆಗೆ ಊಟಕ್ಕೆ ಬರಲಿಕ್ಕೆ ಹೇಳಿ ತಾನು ತನ್ನ ಮನೆಗೆ ಹೋದನು. ಬಳವಂತರಾಯನೂ ರಾಮರಾಯನೂ ಮಂದಿರದ ಹೊರಗೆ ನಿಂತುಕೊಂಡು ತಮ್ಮ ಹೆಸರಿನ ಕಾಗದದ ಮೇಲೆ ತಾವು ಬಂದ ಉದ್ದೇಶವನ್ನು ಬರೆದು ಜವಾನನ ಸಂಗಡ ಕಳಿಸಲು ಕೂಡಲೆ, ಒಬ್ಬ ಸಿಸ್ಟರ್—ಮಿಸ್ ಸ್ಮಿಥ್ ಎಂದು ಅವಳ ಹೆಸರು—ಹೊರಗೆ ಬಂದಳು. ಅವಳ ಹೆಗಲ ಮೇಲೆ ಒಂದು ಕಪ್ಪು ಮೈ ಬಣ್ಣದ ಸುಮಾರು ಎರಡು ವರ್ಷದ ಕೂಸು ಇತ್ತು. ಆಕೆ ಆ ಕೂಸಿನ ಮೂಗನ್ನು ಅದರ ಅಂಗಿಗೆ ಕಟ್ಟಿದ ಕರದ ವಸ್ತ್ರದಿಂದ ಮೇಲೆ ಮೇಲೆ ಒರಿಸುತ್ತಿದ್ದಳು. ಸಿಸ್ಟರಳು ಅಚ್ಚ ಬಿಳೇ ಉಡುಪನ್ನು ಧರಿಸಿದ್ದಳು. ಕೂಸಿನ ಅರಿವೆಗಳು ಸಹ ಬಿಳುಪು. ತನ್ನ ಹೊಟ್ಟೆಯ ಕೂಸೋ ಏನೋ ಅಂಬುವಂತೆ ಆಕೆ ಅದನ್ನು ಬಹಳ ಪ್ರೀತಿಯಿಂದ ಮುದ್ದಾಡುತ್ತಿದ್ದಳು.

ಸಿಸ್ಟರಳು ಮೊದಲು ಅತಿಥಿಗೆ ಅನೇಕ ಪ್ರಶ್ನೆಗಳನ್ನು ಮಾಡಿದಳು. ಅವರು ಸುಶಿಕ್ಷಿತರಿದ್ದು ಮಿಶನ್ನದ ವ್ಯವಸ್ಥೆಯನ್ನು ನೋಡುವ ಲಾಲಸೆಯಿಂದಲೇ ಬಂದಿದ್ದಾರೆಂಬುದನ್ನು ಮನಗಂಡು ಒಬ್ಬ ದಾಯಿಯನ್ನು ಕರೆದು ಅವಳ ಕೈಯಲ್ಲಿ ಕೂಸನ್ನು ಕೊಟ್ಟಳು. ಆ ಮೇಲೆ ಅತಿಥಿಗಳನ್ನು ಕರೆದುಕೊಂಡು ಒಳಗೆ ಹೋದಳು.

ಮೊದಲು ಒಂದು ಚಿಕ್ಕಮಕ್ಕಳ ವರ್ಗವು. ಎಂಟು ಹತ್ತು ಹುಡುಗರು – ಅವರಲ್ಲಿ ಕೆಲವರು ಪಂಚಮರು, ಕೆಲವರು ಮರಾಠರು, ಕೆಲವರು ಬ್ರಾಹ್ಮಣರು. ಎಲ್ಲರದು ಒಂದೇ ಬಣ್ಣದ ಉಡುಪು, ಒಬ್ಬ ಸಿಸ್ಟರಳು ಒಂದು ಜಮಖಾನೆಯ ಮೇಲೆ ಅವರನ್ನು ಕೂಡ್ರಿಸಿಕೊಂಡು ಅವರಿಗೆ ಕಥೆ ಹೇಳುತ್ತಿದ್ದಳು.

ಇನ್ನೊಂದು ವರ್ಗದಲ್ಲಿ ಒಬ್ಬ ಶಿಕ್ಷಿಕೆಯು ಹುಡುಗರೊಡನೆ ಸಮರಸವಾಗಿ ಕೂಡಿಕೊಂಡು ಹಾಡಲಿಕ್ಕೆ ಕಲಿಸುತ್ತಿದ್ದಳು. ಇನ್ನೊಂದು ಕಡೆಗೆ ಹುಡುಗರು ಕಾಗದ ಕತ್ತರಿಸಿ ಹಸ್ತಕೌಶಲ್ಯದ ಸಾಮಾನುಗಳನ್ನು ಮಾಡುತ್ತಿದ್ದರು. ಎಲ್ಲಿ ನೋಡಿದರೂ ಸ್ವಚ್ಛತೆ, ಅಚ್ಚುಕಟ್ಟು, ಸಣ್ಣ ಮಕ್ಕಳ ಕೂಡ ಪ್ರೇಮದ ವರ್ತನವು. ಪಂಚಮರ ಹುಡುಗರು ಇಷ್ಟು ಶುಚಿಯಾಗಿರುವದನ್ನು ನೋಡಿ ರಾಮರಾಯನು ಬಹಳ ಅಚ್ಚರಿಗೊಂಡನು, ಬಳವಂತರಾಯನು ಅಧ್ಯಾಪಿಕೆಯರ ಕಲಿಸುವ ಆಸ್ಥೆಯನ್ನೂ ಪದ್ಧತಿಗಳನ್ನೂ ನೋಡಿ ಪರಮಾನಂದ ಬಟ್ಟನು.

ಮುಂದೆ ಅವರು ಆಟದ ಅಂಗಣಗಳನ್ನು ದಾಟಿ ಪ್ರಾರ್ಥನಾ ಮಂದಿರಕ್ಕೆ ಹೋದರು. ಮಂದಿರವು ಬಹಳ ವಿಶಾಲವಾದದ್ದು. ಎರಡೂ ಬದಿಗಳಲ್ಲಿ ದೊಡ್ಡ ದೊಡ್ಡ ಕಿಡಿಕೆಗಳು. ಎಲ್ಲರಿಗೂ ಕೂಡ್ರಲಿಕ್ಕೆ ಬಾಕುಗಳು. ಒಳಗೆ ಹವೆಯೂ ಬೆಳಕೂ ಮನವಾರೆ ಆಡುತ್ತಿದ್ದವು. ಒಳಗೆ ಹೋದ ಕೂಡಲೆ ಆ ಕಟ್ಟಡದ ಭವ್ಯವಾದ ಗಾಂಭೀರ್ಯದಿಂದ ಮನುಷ್ಯನ ಮನಸ್ಸು ತಾನಾಗಿಯೇ ಶಾಂತ ಹಾಗೂ ಪ್ರಸನ್ನವಾಗುತ್ತಿತ್ತು. ಕೆಲವು ಕಾಲ, ಅಲ್ಲಿಯೇ ಕೂಡ್ರಬೇಕೆಂದು ಮನಸ್ಸಿನಲ್ಲಿ ಅಭಿಲಾಷೆಯಾಗುತ್ತಿತ್ತು.

ಈ ಮಂದಿರದ ಅಂತರ್ಭಾಗವನ್ನು ನಿರುಕಿಸಿದ ಮೇಲೆ ಬಳವಂತರಾಯನಿಗೆ ನಮ್ಮ ದೇವಾಲಯಗಳ ನೆನಪಾಯಿತು. ಅವುಗಳ ಗುಣದೋಷಗಳು ತಟ್ಟನೆ ಅವನ ಮನಸಿಗೆ ಹೊಳೆದುವು. ದೇವಾಲಯಗಳೇನು, ಮಶೀದೆಗಳೇನು, ಚರ್ಚಗಳೇನು – ಎಲ್ಲವೂ ಮನುಷ್ಯನ ಮನಸ್ಸನ್ನು ದೇವರ ಕಡೆಗೆ ಒಯ್ದು ಅವನನ್ನು ಪರಮಾರ್ಥ ಚಿಂತನೆಯಲ್ಲಿ ಸೇರಿಸತಕ್ಕ ಸ್ಥಾನಗಳು, ನಮ್ಮ ಎಷ್ಟೋ ದೇವಾಲಯಗಳಲ್ಲಿ ಹವೆಯ ಸಂಚಾರವಿಲ್ಲ; ಬೆಳಕಿಗೆ

ಆಸ್ಪದವಿಲ್ಲ. ಕಿಡಿಕಿಗಳಿದ್ದರೆ ದೇವರ ಮೇಲೆ ಪಾಪಿಗಳ ನೆರಳು ಬಿದ್ದು ದೇವರ ಪಾವಿತ್ರ್ಯವು ಕಡಿಮೆಯಾದೀತೆಂದು ಹೆದರಿಕೆ. ಸ್ವಚ್ಛತೆಯು ಅಷ್ಟಗಷ್ಟೇ. ಕೆಲವು ಕಡೆಗೆ ಗರ್ಭಗಾರದಲ್ಲಿ ಹಾವುಗಳ ಕಾವಲು. ಒಳಗಿರುವ ಕೊಳೆಯು ಜನರ ದೃಷ್ಟಿಗೆ ಬೀಳಬಾರದೆಂಬ ಸದುದ್ದೇಶದಿಂದಲೇ ಕತ್ತಲೆಯ ಸಾಮ್ರಾಜ್ಯವಿರಬಹುದು. ಕೆಲವು ಗುಡಿಗಳಲ್ಲಿ ಕಣ್ಣುಕಪ್ಪಡೆಗಳ ರಾಜ್ಯವು. ಇಂಥ ದೇವಾಲಯಗಳಲ್ಲಿ ಹೋಗಿ ಸ್ವಲ್ಪ ಹೊತ್ತು ದೇವರ ಮುಂದೆ ಪವಿತ್ರ ವಾತಾವರಣದಲ್ಲಿ ಕೂಡ್ರಬೇಕಾದರೆ ಸಾಧ್ಯವೇ ಇಲ್ಲ. ಒಳಗೆ ಹೋಗಿ ಕೈ ಮುಗಿದ ಕೂಡಲೇ ಯಾವಾಗ ಹೊರಗೆ ಹೋದೇವೆಂದು ಮನಸ್ಸು ತಲ್ಲಣಿಸಿದರೆ ಏನಾಶ್ಚರ್ಯ?

'ಮಿಸ್ ಸ್ಮಿಥ್'ಳು ಅತಿಥಿಗಳಿಗೆ ಮಂದಿರವನ್ನು ತೋರಿಸುತ್ತ ನಡೆದಾಗ ಬಳವಂತರಾಯನ ಮನಸ್ಸಿನಲ್ಲಿ ಈ ಪ್ರಕಾರದ ವಿಚಾರಪರಂಪರೆಗಳು ಎಡಬಿಡದೆ ಸಾಗಿದ್ದುವು. ಸಿಸ್ಟರಳಿಗೆ ಅವನು ಇನ್ನೆಷ್ಟೋ ಪ್ರಶ್ನೆಗಳನ್ನು ಮಾಡಿದನು. ಎಲ್ಲ ಪ್ರಶ್ನೆಗಳಿಗೂ ಆಕೆ ಏನೂ ಬೇಸರವಿಲ್ಲದೆ ತುಂಬಾ ಆಸ್ಥೆಯಿಂದ ಉತ್ತರ ಕೊಟ್ಟಳು. ಅತಿಥಿಗಳು ಅವಳ ಉಪಕಾರವನ್ನು ಯಥೋಚಿತವಾಗಿ ಮನ್ನಿಸಿ ಅವಳಿಗೆ ಆ ಮಂದಿರದ ಸುಸ್ಥಿತಿಯ ಬಗ್ಗೆ ಧನ್ಯವಾದಗಳನ್ನು ಸಮರ್ಪಿಸಿ ಮನೆಯ ಹಾದಿಯನ್ನು ಹಿಡಿದರು.

ಆ ಬ್ರಾಹ್ಮಣನ ಮನೆಯನ್ನು ಮುಟ್ಟಲಿಕ್ಕೆ ಬಹಳ ವೇಳೆಯು ಹಿಡಿಯಿತು. ಯಾಕಂದರೆ ಅವರಿಗೆ ತೀವ್ರವಾಗಿ ದಾರಿಯೇ ಸಿಕ್ಕಲಿಲ್ಲ. ಮೇಲಾಗಿ ಮನಸ್ಸು ವಿಚಾರಮಗ್ನವಾಗಿತ್ತು. ಬ್ರಾಹ್ಮಣನ ಮನೆಯಲ್ಲಿ ಭೋಜನವಾಯಿತು. ಊಟ ಮಾಡುವಾಗ ತಾವು ನೋಡಿದ್ದನ್ನೆಲ್ಲ ಅವನಿಗೆ ಹೇಳಿದರು. ಊರಿಗೆ ಹೋದ ಕೂಡಲೆ ಒಂದು ಹಿಂದೂ-ಮಿಶನ್ ಸ್ಥಾಪಿಸುವ ಬಗ್ಗೆ ತಾನು ಆ ಹೊತ್ತು ನಿರ್ಧಾರ ಮಾಡಿದ್ದೇನೆಂದು ಬಳವಂತರಾಯನು ಆ ಬ್ರಾಹ್ಮಣನಿಗೆ ಹೇಳಿದನು. ಅವನಿಗೆ ಅದನ್ನು ಕೇಳಿ ಪರಮಾನಂದವಾಯಿತು.

"ನೀವು ಕಾಶಿಗೆ ಅಥವಾ ಅಲಹಾಬಾದಕ್ಕೆ ಹೋಗಿ ಅಲ್ಲಿಯ ಆರ್ಯಸಮಾಜ ಮಂದಿರದಲ್ಲಿ ಶುದ್ಧೀಕರಣ ಸಂಸ್ಕಾರವನ್ನು ಹೊಂದಿ ಪುನಃ

ಹಿಂದೂ ಧರ್ಮನೊಳಗೆ ಸಾರ್ವಜನಿಕ ರೀತಿಯಿಂದ ಸೇರಲಿಕ್ಕೆ ಏನು ಅಡ್ಡಿ?" ಎಂದು ಬಳವಂತನು ಆ ಮುದುಕನನ್ನು ಕೇಳಿದನು.

"ಏನೂ ಅಡ್ಡಿಯಿಲ್ಲ. ಬ್ರಾಹ್ಮಣಸಮಾಜದಲ್ಲಿ ಯಾರೂ ನಮ್ಮ ಸಂಗಡ ಬಳಕೆ ಮಾಡದಿದ್ದರೂ ಅಡ್ಡಿಯಿಲ್ಲ. ಹಿಂದೂ ಧರ್ಮದೊಳಗೆ ತಿರುಗಿ ಸೇರಬೇಕೆಂತಲೇ ನನಗೆ ಹಂಬಲವಾಗಿದೆ. ಆದರೆ ನಾವು ಬಡವರು. ಈ ಕೆಲಸಕ್ಕೆ ಬೇಕಾಗುವ ದುಡ್ಡು—" ಎಂದು ವಿಷಾದದಿಂದ ಅಷ್ಟಕ್ಕೇ ಸುಮ್ಮನಾದನು.

"ದುಡ್ಡಿನ ಚಿಂತೆ ನಿಮಗೆ ಬೇಡ. ನಾನು ಹೋದ ಕೂಡಲೆ ನಿಮಗೆ ಐವತ್ತು ರೂಪಾಯಿಗಳನ್ನು ಕಳಿಸುತ್ತೇನೆ. ನೀವು ಶುದ್ಧೀಕರಣವನ್ನು ಹೊಂದಿ ತಿರುಗಿ ಹಿಂದೂ ಧರ್ಮದೊಳಗೆ ಬರಲಿಕ್ಕೇಬೇಕು." ಬಳವಂತನು ಸಮಾಧಾನ ಹೇಳಿದನು. ಅತಿಥಿಗಳು ಹೋಗಿ ಬರುತ್ತೇವೆಂದು ಹೇಳಿದಾಗ ಮುದುಕನ ಕಣ್ಣುಗಳಲ್ಲಿ ನೀರು ತುಂಬಿಬಂದವು. "ನಿಮಗೆ ದೇವರು ದಯಮಾಡಲಿ" ಎಂಬ ಶಬ್ದಗಳು ಮಾತ್ರ ಅವನ ಬಾಯಿಂದ ಹೊರಟವು.

ಮುಂದೆ ನಮ್ಮ ಪ್ರವಾಸಿಕರು ಹಿಮಾಲಯದ ಯಾತ್ರೆಗೆ ಹೊರಡುವವರಿದ್ದರು. ಆದರೆ ಅದೇ ದಿವಸ ಸಾಯಂಕಾಲ ಬಳವಂತರಾಯನ ಕ್ಷೇಮ ಸಮಾಚಾರದ ಪತ್ರಕ್ಕೆ ಶೇಟಜಿಯವರಿಂದ ಉತ್ತರ ಬಂತು. "ನೀವು ಹಿಮಾಲಯದ ಯಾತ್ರೆಗಾಗಿ ಮುಂದೆ ಹೋಗದೆ ಕೂಡಲೆ ತಿರುಗಿ ಬರಬೇಕು. ನೀವು ಹೋಗಿ ಬಹಳ ದಿವಸವಾಯಿತು. ಗೋಶಾಲೆಯ ವ್ಯವಸ್ಥೆಯ ಬಗ್ಗೆ ನನಗೆ ಸ್ವಲ್ಪ ಚಿಂತೆಯಾಗಹತ್ತಿದೆ" ಎಂದು ಪತ್ರದ ತಾತ್ಪರ್ಯವು. ಮತ್ತೊಂದು ಪತ್ರವು ಮುಂಬಯಿಯಿಂದ ವಿನಾಯಕರಾಯನ ಕಡೆಯಿಂದ ಬಂದಿತ್ತು. "ನೀವು ಯಾತ್ರೆಯನ್ನು ಮುಗಿಸಿಕೊಂಡು ಊರಿಗೆ ಹೋಗುವಾಗ ನಮ್ಮಲ್ಲಿ ಒಂದು ದಿವಸವಾದರೂ ಇಳಿಯಲೇಬೇಕು" ಎಂದು ಆಗ್ರಹಪೂರ್ವಕವಾದ ಬೇಡಿಕೆಯು. ಮರುದಿವಸ ಮುಂಜಾನೆ ನಮ್ಮ ಪ್ರವಾಸಿಕರು ಹಿಮಾಲಯಕ್ಕೆ ಅಲ್ಲಿಂದಲೇ ನಮಸ್ಕಾರ ಮಾಡಿ ಪ್ರಯಾಗದ ಮಾರ್ಗವಾಗಿ ಮುಂಬಯಿಗೆ ತೆರಳಿದರು.



೧೨

## ಹಿಂದೂ ಮಿಶನ್

—:०:—



ಸಂಜೆಯು ನಾಲ್ಕು ಘಂಟೆ. ವಿನಾಯಕರಾಯನೂ ಶಂಕರರಾಯರೂ ಕೋರ್ಟಿನಿಂದ ಆದೇ ಬಂದು 'ಮಲಬಾರ ಹಿಲ್' ಮೇಲಿನ ತಮ್ಮ ಬಂಗಲೆಯಲ್ಲಿ ತಮ್ಮ ತಮ್ಮ ಕೋಣೆಗಳಲ್ಲಿ ಆರಾಮ ಖುರ್ಚಿಗಳ ಮೇಲೆ ಒರಗಿದ್ದರು. ಒಳಗೆ ಗಿರಿಜಾಬಾಯಿಯವರು ಚಹಾಪಾನದ ಸಿದ್ಧತೆಯಲ್ಲಿ ತೊಡಗಿದ್ದರು. ಕಮಲಾದೇವಿಯು ಒಂದು ಸಾಮಾಜಿಕ ಕಾದಂಬರಿಯನ್ನು ಓದುತ್ತ ಮನೆಯ ಹೊರಗಿನ ಬೈಲು ಪಡಸಾಲೆಯಲ್ಲಿ ಕುಳಿತಿದ್ದಳು.

ಇದ್ದಕ್ಕಿದ್ದ ಹಾಗೆಯೇ ಒಂದು ವ್ಹಿಕ್ಟೋರಿಯಾ ಮನೆಯ ಮುಂದೆ ಬಂದುನಿಂತಿತು. ಕೂಡಲೆ ಇಬ್ಬರು ತರುಣರು ಗಾಡಿಯಿಂದ ಇಳಿದರು. ಗಾಡಿಯವನಿಗೆ ಸಾಮಾನು ತರಲಿಕ್ಕೆ ಹೇಳಿ ತಾವು ಬಂಗಲೆಯ ಬಾಗಿಲು ದಬ್ಬಿಕೊಂಡು ಒಳಗೆ ಬಂದರು. ಇವರನ್ನು ನೋಡಿದೊಡನೆಯೇ ಕಮಲಾದೇವಿಯು ಎದ್ದು ಬಂದು ಹಸನ್ಮುಖದಿಂದ ಇವರಿಗೆ ಸ್ವಾಗತ ಮಾಡಿದಳು. ಕೂಡಲೇ ವಿನಾಯಕನೂ ಶಂಕರರಾಯರೂ ಹೊರಗೆ ಬಂದರು ನಮಸ್ಕಾರ ಚಮತ್ಕಾರಗಳೂ ಕುಶಲ ಪ್ರಶ್ನೆಗಳೂ ಆದವು. ಅಕಸ್ಮಾತ್ತಾಗಿ ಮಿತ್ರರು ಬಂದದ್ದನ್ನು ನೋಡಿ ವಿನಾಯಕನ ಎದೆಯಲ್ಲಿ ತುಂಬಾ ಅಚ್ಚರಿ, ಹಿರಿದಾದ ಹಿಗ್ಗು. ಕೂಡಲೆ ಮಿತ್ರರಿಗೆ ಯೋಗ್ಯ ಸತ್ಕಾರವನ್ನು ನಡೆಯಿಸಿದನು. ಸತ್ಕಾರದ ಕಾರ್ಯದಲ್ಲಿ ಕಮಲಾದೇವಿಯು ಅವನಿಗೆ ಆಸ್ಥೆಯ ಸಹಕಾರಿಣಿಯು.

ಮಿತ್ರರು ಸ್ನಾನ ಭೋಜನಗಳನ್ನು ತೀರಿಸಿಕೊಂಡು ಹೊರಗೆ ಬಂದ ಕೂಡಲೆ ಪ್ರವಾಸದ ಬಗ್ಗೆ ಅನೇಕ ಪ್ರಶ್ನೋತ್ತರಗಳು ನಡೆದವು. ಗಂಗಾ

ಸ್ನಾನ, ತ್ರಿವೇಣೀ ಸಂಗಮ, ಕಾಶೀ ವಿಶ್ವೇಶ್ವರ ದರ್ಶನ, ಮೊದಲಾದ ಎಲ್ಲ ವಿಷಯಗಳೂ ಒಂದರ ಹಿಂದೊಂದು ಹಾದು ಹೋದವು. ಅಯೋಧ್ಯೆಯ ಕ್ರೈಸ್ತಬ್ರಾಹ್ಮಣನ ಧರ್ಮಸಂಕಟವನ್ನು ಕೇಳಿ ಎಲ್ಲರೂ ತಡಪಡಿಸಿದರು. ಆ ಮೇಲೆ ಹಿಂದೂ ಧರ್ಮಪ್ರಸಾರಕ ಸಂಘದ ಸ್ಥಾಪನೆಯ ಬಗ್ಗೆ ಚರ್ಚೆಯು ನಡೆಯಿತು. ಶಂಕರರಾಯರು–"ಇದು ವ್ಯವಹಾರ್ಯವಲ್ಲ, ನಮ್ಮ ಜನರಲ್ಲಿ ದುಡ್ಡಿಲ್ಲ ಸಂಘಟನ ಶಕ್ತಿಯಿಲ್ಲ" ಎಂದು ತಮ್ಮ ಅನೇಕ ಆಕ್ಷೇಪಗಳನ್ನು ಮುಂದಿಟ್ಟರು. ತರುಣ ಮಂಡಲಿಗೆ ಅವರ ಆಕ್ಷೇಪಗಳು ನಿರಾಧಾರವಾಗಿ ತೋರಿದುವು. ಕಮಲಾದೇವಿಯೂ ವಿನಾಯಕರಾಯನೂ ಮಿಶನ್ನದ ಕಲ್ಪನೆಗೆ ತುಂಬಾ ಪುಷ್ಟಿಯನ್ನು ಕೊಟ್ಟರು. ಕಮಲಾದೇವಿಯು ಬಳವಂತರಾಯನ ಹುರುಪನ್ನೂ ಸಮಾಜದ ಸೇವಾ ಬುದ್ಧಿಯನ್ನೂ ನೋಡಿ ಅವನಿಗೆ ಮನಸಿನಲ್ಲಿ ಮನ್ನಣೆ ಮಾಡಿದಳು.

ಮರುದಿವಸ ನಮ್ಮ ಪ್ರವಾಸಿಕ ಮಂಡಳಿಯು ಊರಿಗೆ ಹೊರಡುವವರಿದ್ದರು. ಆದರೆ ವಿನಾಯಕನು ಅವರನ್ನು ಬಿಡಲೇ ಇಲ್ಲ. ಆ ಹೊತ್ತು ಅತಿಥಿಗಳಿಗೆ ಇಚ್ಛಾಭೋಜನವನ್ನು ಮಾಡಿಸಿದನು. ವಿನಾಯಕನ ಉತ್ಸಾಹಕ್ಕೂ ಕಮಲಾದೇವಿಯ ಆನಂದಕ್ಕೂ ಎಣೆಯೇ ಇದ್ದಿಲ್ಲ.

ಮರುದಿವಸ ಮುಂಜಾನೆ ರೈಲಿಗೆ ಹೋಗುವದು ನಿಶ್ಚಿತವಾಯಿತು. ಆಗ ವಿನಾಯಕರಾಯನು–"ಬಳವಂತರಾವ, ನಿಮ್ಮ ಮಿಶನ್ನು ಹೊರಡುವದೋ? ಅಥವಾ ಇನ್ನೂ ಅದು ವಿಚಾರಾವಸ್ಥೆಯಲ್ಲಿದೆಯೋ?" ಎಂದು ಕೇಳಿದನು.

ಬಳವಂತರಾವ–"ಏನೂ ಅನುಮಾನವಿಲ್ಲ. ಬರುವ ಯುಗಾದಿ ಪ್ರತಿಪದೆಗೆಹೊರಡಲಿಕ್ಕೇಬೇಕು. ದಾನಶೂರರಾದ ಶೇಟಜಿಯವರು ಇರುವತನಕ ನನಗೆ ಚಿಂತೆಯಿಲ್ಲ. ನಿಮ್ಮ ಹಾಯಕೋರ್ಟಿಗೆ ಬರುವು ಎಂದಾಗುವದು?" ಎಂದು ಶಂಕರರಾಯರನ್ನು ಕೇಳಿದನು.

ಶಂಕರರಾಯರು– "ಅದೇ ಸುಪ್ರೀಮಕ್ಕೆಕೋರ್ಟಿಗೆ ಬಿಡುವು ಆಗಬಹುದು" ಎಂದು ನುಡಿದರು.

"ಹಾಗಾದರೆ ನೀವೆಲ್ಲರೂ ಬೇಸಿಕೆಯು ಬಿಡುವಿನಲ್ಲಿ ಚಂದ್ರಪುರಕ್ಕೆ ಬರಲಿಕ್ಕೆಬೇಕು." ಎಂದು ಬಳವಂತನು ಆಗ್ರಹದಿಂದ ಸೂಚಿಸಿದನು.

"ಚಂದ್ರಪುರದ ಹವೆಯೂ ಉತ್ತಮ. ಹೈಸವು ಸರ್ವೋತ್ಕೃಷ್ಟವಾದದ್ದು. ತಿರುಗಾಡಲಿಕ್ಕೆ ರಸ್ತೆಗಳಿಗೇನೂ ಕಡಿಮೆಯಿಲ್ಲ. ಅದಕ್ಕೆ ಒಡವರ ಮಹಾಬಳೇಶ್ವರವೆಂದರೂ ಅಡ್ಡಿಯಿಲ್ಲ. ಒಮ್ಮೆ ಬಂದು ನೋಡಬಹುದು" ಎಂದು ರಾಮರಾಯನೂ ಆಗ್ರಹ ಮಾಡಿದನು.

"ಒಳ್ಳೇದು, ಬಂದರೂ ಬರಬಹುದು, ನೋಡೋಣ." ಎಂದು ಶಂಕರರಾಯರು ಉತ್ತರ ಕೊಟ್ಟರು.

ಅತಿಥಿಗಳು ಮರುದಿವಸ ಮುಂಜಾನೆ ಊರಿಗೆ ಹೊರಟರು. ವಿನಾಯಕರಾಯನು ಮಿತ್ರರನ್ನು ಕಳಿಸಲಿಕ್ಕೆ ಬೋರೀಬಂದರಕ್ಕೆ ಹೋದನು. ಕಮಲಾದೇವಿಗೂ ಸ್ಟೇಶನ್ನಿಗೆ ಹೋಗಬೇಕೆಂದು ಬಹಳ ಮನಸ್ಸಿತ್ತು. ಆದರೆ ತಂದೆಯವರಿಗೆ ಇದು ಸೇರುವದಿಲ್ಲೆಂದು ತಿಳಿದುಕೊಂಡು ಪೋಗಲಿಲ್ಲ.

ಅವರು ಊರಿಗೆ ಹೋದ ದಿವಸ ಕಮಲಾದೇವಿಯ ಮನಸ್ಸಿನಲ್ಲಿ ಏನೋ ಒಂದು ಹಳಹಳಿ-ಒಂದು ತರದ ಬೇಸರ. ಯಾವದೋ ಒಂದು ಕಲ್ಪನಾ ಸೃಷ್ಟಿಯಲ್ಲಿ ಅವಳ ಮನಸ್ಸು ಎಡೆಗಾಣದೆ ಅಲೆದಾಡುತ್ತಿತ್ತು.

* * * *

ಬಳವಂತನು ಚಂದ್ರಪುರಕ್ಕೆ ಬಂದಕೂಡಲೆ ಶೇಟಜಿಯವರಿಗೆ ಭೆಟ್ಟಿಯಾಗಿ ಅವರ ಪರಿಚಯ ಪತ್ರಗಳಿಂದ ತಮಗೆ ಪ್ರವಾಸದಲ್ಲಿ ಎಷ್ಟು ಸುಖಸೌಕರ್ಯಗಳು ಉಂಟಾದವೆಂಬದನ್ನು ಹೇಳಿ ಅವರ ಉಪಕಾರವನ್ನು ಮನಃಪೂರ್ವಕವಾಗಿ ಮನ್ನಿಸಿದನು. ಬಳವಂತನು ಬಂದದ್ದರಿಂದ ಶೇಟಜಿಯವರಿಗೆ ಆನಂದವು ಹಿಡಿಸಲಾರದಾಗಿ ಉಕ್ಕೇರಿತು. ನಮ್ಮ ಯಾತ್ರಿಕರ ತೀರ್ಥಯಾತ್ರೆಯ ಅನುಭವಗಳನ್ನು ಅವರು ಮನಸಪಟ್ಟು ಕೇಳಿದರು. ಶುಷ್ಕಕಾರಣಗಳ ಮೂಲಕವಾಗಿ ಇಲ್ಲವೆ ಹಿಂದೂ ಧರ್ಮಸಮಾಜದಲ್ಲಿ ಉಚಿತವಾದ ರಕ್ಷಣೆಯೂ ಮನ್ನಣೆಯೂ ಸಿಗದ ಮೂಲಕವಾಗಿ ಹಿಂದುಗಳು ಪರಧರ್ಮದಲ್ಲಿ ಸೇರುವ ಬಗೆಯನ್ನು ಕೇಳಿ ಅವರ ಕೋಮಲವಾದ ಅಂತಃಕರಣದಲ್ಲಿ

ಪ್ರಚಂಡವಾದ ಅಲೆಗಳು ಏಳಲಾರಂಭಿಸಿದುವು. ತಿಳಿಯದೆ ಪರಧರ್ಮದಲ್ಲಿ ಸೇರಿಕೊಂಡ ಜನರ ಶುದ್ಧೀಕರಣವನ್ನು ಮಾಡಿ ಅವರನ್ನು ತಿರುಗಿ ಹಿಂದೂ ಧರ್ಮದೊಳಗೆ ಸೇರಿಸಿಕೊಳ್ಳಲಿಕ್ಕೂ, ವೈದಿಕ ಧರ್ಮದ ಉದಾತ್ತತತ್ವಗಳನ್ನೂ ಹಿತಕರವಾದ ಆಚಾರಗಳನ್ನೂ ಸಮಾಜದಲ್ಲಿ ಪ್ರಚಾರಗೊಳಿಸಿ ಅರ್ಥಶೂನ್ಯವಾದ ಧರ್ಮಾಂತರ ಕ್ರಿಯೆಗಳು ಎಂದೂ ಸಂಭವಿಸದಂತೆ ಏರ್ಪಾಡು ಮಾಡುವದಕ್ಕಾಗಿ ‘ ಹಿಂದೂ ಮಿಶನ್ ’ ಅಥವಾ ‘ ಹಿಂದೂ ಧರ್ಮಸಂರಕ್ಷಕ ಸಂಘ ’ ವೊಂದನ್ನು ಸ್ಥಾಪಿಸುವದಕ್ಕೂ ಬಳವಂತರಾಯನೂ ರಾಮರಾಯನೂ ಬಹಳ ಹುರುಪಿನಿಂದ ಪ್ರಸ್ತಾಪ ತೆಗೆಯಲು ಶೇಟಜಿಯವರು ಅದಕ್ಕೆ ತಮ್ಮ ಪೂರ್ಣ ಬೆಂಬಲವನ್ನು ಕೊಡುವ ಬಗ್ಗೆ ಮಾತು ಕೊಟ್ಟರು. ಅಪ್ಪಾಸಾಹೇಬನಿಗಂತೂ ಹಿಂದೂ ಮಿಶನ್ನದ ಕಲ್ಪನೆಯು ತುಂಬಾ ಸರಿದೋರಿತು. ಸ್ವಧರ್ಮದ ಅಜ್ಞಾನವೇ ಧರ್ಮಾಂತರದ ಮೂಲ ಕಾರಣವೆಂದು ಅವನು ಸ್ವಾನುಭವಪೂರ್ವಕವಾಗಿ ಪ್ರತಿಪಾದಿಸಿದನು. ಅದಲ್ಲದೆ ಇಂಥ ಸಂಸ್ಥೆಗೆ ದುಡ್ಡಿನ ಸಹಾಯ ಮಾಡುವದಕ್ಕೂ ಇಂಥ ಸಂಸ್ಥೆಯಲ್ಲಿ ತಾನೂ ತನ್ನ ಕೈಯಿಂದಾದಷ್ಟು ಕೆಲಸ ಮಾಡುವದಕ್ಕೂ ಅಭಿವಚನ ಕೊಟ್ಟನು. ಶೇಟಜಿಯವರ ವರದಹಸ್ತವಂತೂ ಬಳವಂತರಾಯನಿಗೆ ಹಸ್ತಗತವಾಗಿತ್ತು. ಈ ಪ್ರಕಾರ ಹಿಂದೂ ಮಿಶನ್ನದ ಜನ್ಮೋತ್ಸವದ ಪೂರ್ವಸಿದ್ಧತೆಯು ಬಹಳ ಭರದಿಂದ ಆರಂಭವಾಯಿತು.

ಮುಂದೆ ಕೆಲವು ದಿವಸಗಳಲ್ಲಿಯೇ ಒಳ್ಕಾರಿಯಿಂದ ರಾಧಾಬಾಯಿಯೂ ಶಾರದಾಬಾಯಿಯೂ ಚಂದ್ರಪುರಕ್ಕೆ ಬಂದರು. ಶಾರದಾಬಾಯಿಯ ಮಗನಾದ ಮಾಧವನೂ ಈಗ ಮೂರು ವರ್ಷದವನಾಗಿ ಯಾವಾಗಲೂ ಆಟಗುಳಿಯಾಗಿ ಎಲ್ಲರಿಗೂ ಪ್ರಿಯನಾಗಿದ್ದನು. ತನ್ನ ಗಂಡನು ಏನಾದರೊಂದು ಉದ್ಯೋಗಕ್ಕೆ ಹತ್ತಬೇಕು ಇಲ್ಲವೆ ದನಗಳ ಚಿಕಿತ್ಸಾಲಯವನ್ನು ತೆಗೆದು ಆದಷ್ಟು ದ್ರವ್ಯಾರ್ಜನವನ್ನು ಮಾಡಬೇಕು—ಎಂದು ತವಕಿಸುತ್ತಿದ್ದ ರಾಧಾಬಾಯಿಗೆ ರಾಮರಾಯನು ಶೇಟಜಿಯ ಗೋಶಾಲೆಯ ಮೇಲ್ವಿಚಾರಕನಾಗಿ ತಿಂಗಳುತಿಂಗಳಿಗೂ ಸಂಬಳವನ್ನು ತರುವ ಮಾರ್ಗಕ್ಕೆ ಹತ್ತಲು ಸಂತೋಷವಾಯಿತು. ಅವರೂ ಸ್ವತಂತ್ರವಾಗಿ ಒಂದು ಮನೆ ಮಾಡಿಕೊಂಡು ಚಂದ್ರಪುರದಲ್ಲಿ ಇರಹತ್ತಿದರು. ಈ ಪ್ರಕಾರ ಬಳವಂತರಾಯನು

ರಾಮರಾಯನನ್ನು "ಸುಶಿಕ್ಷಿತ ಗೌಳಿ" ಯ ಕೆಲಸಕ್ಕೆ ಹಚ್ಚಿ ಗೋಶಾಲೆಯನ್ನು ಅವನಿಗೆ ಒಪ್ಪಿಸಿ ತಾನು ಮಿಶನ್ನದ ಕಾರ್ಯದಲ್ಲಿ ಎಲ್ಲ ವೇಳೆಯನ್ನು ಹಾಕಹತ್ತಿದನು.

ಶೇಟಜಿಯವರು ಊರಹೊರಗೆ ತೋಟದಲ್ಲಿರುವ ತಮ್ಮ ಬಂಗಲೆಯನ್ನು ಮಿಶನ್ನಿಗೆ ಬಾಡಿಗೆಯಿಲ್ಲದೆ ಕೊಟ್ಟರು. ಅಪ್ಪಾಸಾಹೇಬನು ಮಿಶನ್ನಿಗೆ ತಿಂಗಳೊಂದಕ್ಕೆ ಎರಡುನೂರು ರೂಪಾಯಿಗಳನ್ನು ಕೊಡಲೊಪ್ಪಿದನು. ಇದಲ್ಲದೆ ಮಿಶನ್ನದಲ್ಲಿ ವಸತಿಗೃಹದ ಸಂಚಾಲಕನ ಕೆಲಸವನ್ನು ಪ್ರತಿಫಲವಿಲ್ಲದೆ ಮಾಡುವೆನೆಂದು ವಾಗ್ದಾನ ಕೊಟ್ಟನು. ಬಳವಂತನು ಮೊದಲು ವರ್ತಮಾನಪತ್ರಗಳಲ್ಲಿ ಹಿಂದೂ ಮಿಶನ್ನದ ಒಗ್ಗೆ ಲೇಖಗಳನ್ನು ಬರೆದು ಅದರ ಬಗ್ಗೆ ಜನರ ಮನಸ್ಸಿನಲ್ಲಿರುವ ಶಂಕೆಕುಶಂಕೆಗಳನ್ನು ದೂರ ಮಾಡಿದನು. ಚಂದ್ರಪುರದಲ್ಲಿ ಒಂದು ವ್ಯಾಖ್ಯಾನ ಮಾಲೆಯನ್ನು ತೆಗೆದು ಹಿಂದೂ ಧರ್ಮಕ್ಕೆ ಶುದ್ಧಿಯೂ ಸಂಘಟನವೂ ಎಷ್ಟು ಅವಶ್ಯಕವಾಗಿವೆಯೆಂಬದನ್ನು ಜನರ ಮನಸ್ಸಿನಲ್ಲಿ ಬಿಂಬಿಸಿದನು. ಹಿಂದೂ ಧರ್ಮದ ಜೀವಾಳವೇನು? ಅದು ಮುಖ್ಯವಾಗಿ ಒತ್ತಿ ಹಿಡಿದಿರುವ ತತ್ವಗಳೂ ವಿಚಾರಗಳೂ ಯಾವವು? ಆ ತತ್ವಗಳಿಗೆ ಪೋಷಕವಾದ ವಿಚಾರ ಪದ್ಧತಿಗಳು ಯಾವವು? ಅವುಗಳಿಗೆ ಘಾತಕವಾದವುಗಳು ಯಾವವು? ಅಸ್ಪೃಶ್ಯತೆಯು ಹಿಂದೂ ಧರ್ಮಕ್ಕೆ ಎಂಥ ಕಲಂಕ ಹಚ್ಚುವ ಆಚಾರವಾಗಿದೆ? ಹಿಂದೂ ಧರ್ಮದ ಪವಿತ್ರವಾದ ಹಾಗೂ ಪ್ರಾಣಪೋಷಕವಾದ ಜ್ಞಾನತೀರ್ಥವು ಹಿಂದುವೆಂದೆನಿಸಿದ ಪ್ರತಿಯೊಬ್ಬನಿಗೂ ಯಾಕೆ ಸಿಗಬಾರದು? ಹೀಗೆ ಸಿಗದ್ದರಿಂದ ಹಿಂದೂ ಸಮಾಜದ ಬಂಧನಗಳು ಎಷ್ಟು ಸಡಿಲಾಗಿವೆ? ಎಷ್ಟು ಜನರು ಅಧ್ಯಾತ್ಮ ಜೀವನಕ್ಕಾಗಿ ಹಿಂದೂ ಧರ್ಮದ ಆಶೆಯನ್ನು ಬಿಟ್ಟು ಪರಧರ್ಮಗಳ ಮೋರೆಯನ್ನು ನೋಡಹತ್ತಿದ್ದಾರೆ? ಇದೇ ಮೊದಲಾದ ಅನೇಕ ವಿಷಯಗಳನ್ನು ಸಮರ್ಪಕವಾಗಿ ಚರ್ಚಿಸಿ ಹಿಂದೂ – ಮಿಶನ್ನಿಗೆ ಅನುಕೂಲವಾದ ವಾತಾವರಣವನ್ನು ಕಲ್ಪಿಸಿಕೊಂಡನು. ಎಷ್ಟೋ ಉಂಡುಟ್ಟು ಸುಖಿಯಾಗಿದ್ದ ಸದ್ಗೃಹಸ್ಥರು ತಿಂಗಳು ತಿಂಗಳಿಗೆ ದ್ರವ್ಯರೂಪವಾಗಿಯೂ ಧಾನ್ಯರೂಪವಾಗಿಯೂ ಮಿಶನ್ನಿಗೆ ಸಹಾಯ ಮಾಡಲಿಕ್ಕೆ ಒಪ್ಪಿಕೊಂಡರು.

ಯುಗಾದಿಯ ಸುಮುಹೂರ್ತದ ದಿವಸ ಹಿಂದೂ ಮಿಶನ್ನದ ಜನ್ಮ

ದಿವಸವನ್ನು ನಿಯಮಿಸಲ್ಪಟ್ಟಿತ್ತು. ಯುಗಾದಿಯಂತೂ ಇನ್ನು ಎಂಟೇ ದಿವಸ ಉಳಿದಿತ್ತು. ರಾಮರಾಯನು– "ಬಳವಂತಾ, ಮಿಶನ್ನಿಗೆ ಕಟ್ಟಡವೂ ಸಿಕ್ಕಿತು ದುಡ್ಡೂ ಸಿಕ್ಕಿದೆ. ಇನ್ನೂ ಸಿಗಬಹುದು. ಆದರೆ ಮಿಶನ್ನದಲ್ಲಿಟ್ಟುಕೊಳ್ಳಲಿಕ್ಕೆ ಹುಡುಗರು ಎಲ್ಲಿದ್ದಾರಪ್ಪಾ ? ಹುಡುಗರೇನು ಪೇಟೆಯಲ್ಲಿ ಸಿಗಬಹುದಾದ ವಸ್ತುಗಳೇ ?" ಎಂದು ಚೇಷ್ಟೆ ಮಾಡಿದನು. ಬಳವಂತನು– "ಹುಡುಗರಿಗೇಕೆ ಅಷ್ಟು ಚಿಂತೆ? ದರಿದ್ರ ಹುಡುಗರೆಷ್ಟು ಬೇಕು ನಿನಗೆ, ನಮ್ಮ ಸಮಾಜದಲ್ಲಿ ? ನಾಳೆ ಸಂಜೆಯೊಳಗೆ ನಿನಗೆ ಹುಡುಗರನ್ನು ತಂದು ತೋರಿಸುತ್ತೇನೆ. ನೋಡು " ಎಂದು ಧೈರ್ಯದಿಂದ ಎದೆತಟ್ಟಿ ಹೇಳಿದನು.

ಬಳವಂತರಾಯನು ಮರುದಿವಸ ಊರಲ್ಲಿ ಅಡ್ಡಾಡಿ ಹತ್ತು ಬಡ ಹುಡುಗರನ್ನು ಕರೆದುಕೊಂಡು ಬಂದನು. ಅವರೆಲ್ಲರೂ ಅಸ್ಪೃಶ್ಯರ–ಹರಿಜನರ-ಹುಡುಗರು. ಅವರ ವಯಸ್ಸು ಆರು ವರ್ಷದಿಂದ ಹದಿನಾಲ್ಕು ವರ್ಷ. ಅವರಿಗೆ ಅನ್ನ ವಸ್ತ್ರಗಳನ್ನೂ ಶಿಕ್ಷಣವನ್ನೂ ಧರ್ಮಾರ್ಥವಾಗಿ ಕೊಡುವ ಬಗ್ಗೆ ವಾಗ್ದಾನ ಕೊಟ್ಟದ್ದರಿಂದ ಅವರ ತಂದೆತಾಯಿಗಳು ಅವರನ್ನು ಮಿಶನ್ನಿಗೆ ಕಳಿಸಲಿಕ್ಕೆ ಆನಂದದಿಂದ ಒಪ್ಪಿಕೊಂಡರು.

ಯುಗಾದಿಯ ಸುಮುಹೂರ್ತದ ದಿವಸ 'ಹಿಂದೂ ಮಿಶನ್'ದ ಅಸಾಧಾರಣ ಸಮಾರಂಭವು ಜರುಗಿತು. ಊರೊಳಗಿನ ಎಲ್ಲ ಸಭ್ಯ ಗೃಹಸ್ಥರೂ ಸಭೆಗೆ ದಯಮಾಡಿಸಿದ್ದರು. ಮಿಶನ್ನದ ಕಟ್ಟಡವು ಗುಡಿತೋರಣಗಳಿಂದ ಸುಶೋಭಿತವಾಗಿತ್ತು. ಶೇಟಜಿ ಗೋವರ್ಧನದಾಸರೇ ಅಧ್ಯಕ್ಷಸ್ಥಾನದಲ್ಲಿ ವಿರಾಜಮಾನರಾಗಿದ್ದರು. ಬಳವಂತರಾಯನು ಸಂಸ್ಥೆಯ ಜನ್ಮಪೂರ್ವದ ಇತಿಹಾಸವನ್ನೂ ಅದರ ಉದ್ದೇಶಗಳನ್ನೂ ಹೇಳಿದ ಬಳಿಕ ಶೇಟಜಿಯವರು ತಮ್ಮ ಭಾಷಣದಲ್ಲಿ ಸಂಸ್ಥೆಯ ಅವಶ್ಯಕತೆಯನ್ನು ಜನರ ಮನಸ್ಸಿನ ಬಿಂಬಿಸಿ ಬಳವಂತರಾಯನ ನಿಃಸ್ವಾರ್ಥತೆಯನ್ನೂ ಸಮಾಜಸೇವಾತತ್ಪರತೆಯನ್ನೂ ಮುಕ್ತಕಂಠವಾಗಿ ಹೊಗಳಿ ಇಂಥ ಮನುಷ್ಯನ ಕೈಯಲ್ಲಿ ಸಂಸ್ಥೆಯನ್ನೂ ದುಡ್ಡನ್ನೂ ಜನರು ನಿಶ್ಚಿಂತೆಯಿಂದ ಒಪ್ಪಿಸಬಹುದೆಂದು ಸಾರಿ ಹೇಳಿದರು. ಆ ಮೇಲೆ ಪದ್ಧತಿಯ ಪ್ರಕಾರ ಒಂದು ವ್ಯವಸ್ಥಾಪಕ ಮಂಡಲವು ನಿರ್ಮಾಣವಾಯಿತು. ಆದರೂ ಬಳವಂತರಾಯನೂ ಅವನ ಸಹಾಯಕರೂ ಇವರೆ

ಎಲ್ಲ ಕಾರ್ಯಕರ್ತರೆಂದು ಎಲ್ಲರಿಗೂ ಗೊತ್ತೇ ಇತ್ತು. ಆ ದಿವಸ ಜನರಲ್ಲಿ ವಿಶ್ವಾಸದ ಬಗ್ಗೆ ಬಹಳ ಉತ್ಸಾಹವು ಕಂಡು ಬಂತು. ಸ್ನಾನ ಮಾಡಿ ಹಣೆಗೆ ಗಂಧವನ್ನು ಹಚ್ಚಿಕೊಂಡು ಶುಚಿಯಾದ ಒಂದೇ ತರದ ಉಡುಪುಗಳನ್ನು ಧರಿಸಿಕೊಂಡು ಸಭೆಯ ಒಂದು ಭಾಗದಲ್ಲಿ ಕೂತುಕೊಂಡಿದ್ದ ಹರಿಜನ ಬಾಲಕರನ್ನು ನೋಡಿ ಇವರನ್ನು ಹೀಗೆಯೇ ಸುಶಿಕ್ಷಿತರನ್ನಾಗಿ ಸುಸಂಸ್ಕೃತರನ್ನಾಗಿ ಮಾಡಿದರೆ ಅದು ಹೆಚ್ಚಿನ ಸಮಾಜಸೇವೆಯೆಂದು ಎಲ್ಲರೂ ತಲೆದೂಗಿದರು.

ವಿಶ್ವಾಸದ ಕೆಲಸಕ್ಕೆ ಆರಂಭವಾಯಿತು. ಹುಡುಗರು ದಿನಾಲು ಮುಂಜಾನೆ ಐದು ಘಂಟೆಗೆ ಏಳುವರು. ಏಳು ಘಂಟೆಯೊಳಗಾಗಿ ಎಲ್ಲರೂ ಸ್ನಾನ ಮಾಡಿ ತಮ್ಮ ತಮ್ಮ ಅರಿವೆಗಳನ್ನು ಒಗೆದುಕೊಳ್ಳುವರು. ಆ ಮೇಲೆ ಮಂದಿರದ ಸಭಾಗೃಹದಲ್ಲಿ ಎಲ್ಲರೂ ನೆರೆದು ಗುರುವು ಹೇಳಿದಂತೆ ಗಾಯನದಿಂದ ಈಶಪ್ರಾರ್ಥನೆಯನ್ನು ಮಾಡುವರು. ಏಳೂವರೆಗೆ ಘಂಟೆಯಿಂದ ಹತ್ತುವರೆ ಘಂಟೆಯವರೆಗೆ ಪಾಠಗಳು. ಆ ಮೇಲೆ ಭೋಜನ-ವಿಶ್ರಾಂತಿ. ಮಧ್ಯಾಹ್ನ ಒಂದು ಘಂಟೆಯಿಂದ ಐದು ಘಂಟೆಯವರೆಗೆ ಮತ್ತೆ ಪಾಠಗಳು. ಐದು ಘಂಟೆಯಿಂದ ಆರೂವರೆ ಘಂಟೆಯವರೆಗೆ ಆಟಗಳು ಇಲ್ಲವೆ ತೋಟದಲ್ಲಿ ಕೆಲಸ ಮಾಡುವದು. ಏಳು ಘಂಟೆಗೆ ಎಲ್ಲರೂ ಕೂಡಿಕೊಂಡು ಸುಸ್ವರದಿಂದ ದೇವರ ಪ್ರಾರ್ಥನೆ ಮಾಡುವದು. ಆ ಮೇಲೆ ಭೋಜನ-ವಿಶ್ರಾಂತಿ-ಅಭ್ಯಾಸ. ರಾತ್ರಿ ಒಂಬತ್ತು ಘಂಟೆಗೆ ಎಲ್ಲರೂ ಮಲಗುವದು.

ಹುಡುಗರ ಊಟ ಉಡಿಗೆ, ಸ್ನಾನ, ವ್ಯಾಯಾಮ ಇವುಗಳ ಮೇಲ್ವಿಚಾರಣೆಯನ್ನು ಅಪ್ಪಾಸಾಹೇಬನು ಮಾಡುತ್ತಿದ್ದನು. ಒಬ್ಬ ಅಡಿಗೆಯವನು ಎರಡು ಹೊತ್ತು ಅಡಿಗೆ ಮಾಡಿ ಹುಡುಗರಿಗೆ ಬಡಿಸುವನು. ಹುಡುಗರು ತಮ್ಮ ತಮ್ಮ ಕೋಣೆಗಳನ್ನೂ ಶಾಲೆಯ ಗೃಹವನ್ನೂ ತಾವೇ ಉಡುಗಿ ಸ್ವಚ್ಛ ಮಾಡಿಕೊಳ್ಳುವರು. ಅಡಿಗೆಯವನೂ ಮಂದಿರದ ಕಾವಲುಗಾರನೂ ಹೊರತಾಗಿ ಇನ್ನಾರೂ ಸಂಬಳದ ಆಳುಗಳಿಲ್ಲ. ಶಾಲೆಯ ಎಲ್ಲ ಕೆಲಸಗಳನ್ನೂ ಹುಡುಗರೇ ಹಂಚಿಕೊಂಡು ಮಾಡುವರು. ಅಧ್ಯಾಪಕತ್ವದ ಕೆಲಸವು ಮುಖ್ಯವಾಗಿ ಬಳವಂತರಾಯನ ಕಡೆಗೆ. ಅಪ್ಪಾಸಾಹೇಬನೂ ಅವನ ಪತ್ನಿಯಾದ ನರ್ಮದಾಬಾಯಿಯೂ ಹುಡುಗರಿಗೆ ಪಾಠ ಹೇಳುವಲ್ಲಿ ನೆರವಾಗು

ತ್ತಿದ್ದರು. ರಾಮರಾಯನೂ ಶಾರದಾಬಾಯಿಯೂ ಸಮಯ ಸಿಕ್ಕಾಗ ಬಂದು ಪಾಠಶಾಲೆಯ ಕೆಲಸದಲ್ಲಿಯೂ ವಸತಿಗೃಹದ ಕೆಲಸದಲ್ಲಿಯೂ ತಮ್ಮಿಂದಾದಷ್ಟು ಸಹಾಯ ಮಾಡುತ್ತಿದ್ದರು.

---

## ೧೩

## ಸಮಾಜದಲ್ಲಿ ಪ್ರತಿಷ್ಠಿತರೆಂದು ಯಾರಿಗೆ ಅನ್ನಬೇಕು?



"ಕಾಕಾ, ನನಗೆ ಈ ಮಿಶನ್ನಿನಲ್ಲಿ ಕೆಲವು ಕಾಲ ಕೆಲಸ ಮಾಡಬೇಕೆಂದು ಅಪೇಕ್ಷೆಯಾಗಿದೆ. ದಯಮಾಡಿ ತಮ್ಮ ಅನುಜ್ಞೆಯನ್ನು ಕೊಡುವಿರಾ?"

"ಕಮಲಾ, ಇದು ಆಗದ ಮಾತು. ಸಮಾಜದಲ್ಲಿ ಉಚ್ಚ ಪದದಲ್ಲಿರುವ ನಮ್ಮಂಥವರಿಗೆ ಇದು ಸಲ್ಲದ ಕೆಲಸವು. ಇಂಥ ಅಪ್ರತಿಷ್ಠಿತರಾದ ಜನರ ಸಂಗಡ ನೀನು ಎಂದೂ ಕೆಲಸ ಮಾಡಬಾರದು. ತಿಳಿಯಿತೇ?"

ಈ ಪ್ರಕಾರ ಶಂಕರರಾಯರಿಗೂ ಕಮಲಾದೇವಿಗೂ ಒಂದೇ ಸಮನೇ ಮಾತು ಮರುಮಾತುಗಳು ನಡೆದಿದ್ದವು.

ಶಂಕರರಾಯರು ಬೇಸಿಗೆಯ ವಿರಾಮ ಕಾಲದಲ್ಲಿ ತಮ್ಮ ಮನೆಯ ಜನರೊಂದಿಗೆ ಚಂದ್ರಪುರಕ್ಕೆ ದಯಮಾಡಿಸಿದ್ದರು. ಅವರಿಗಾಗಿ ಬಳವಂತನು ಒಂದು ಒಳ್ಳೇ ಬಂಗಲೆಯನ್ನು ಗೊತ್ತು ಮಾಡಿ ಅವರಿಗೆ ಎಲ್ಲ ಅನುಕೂಲ್ಯಗಳನ್ನು ಒದಗಿಸಿ ಕೊಟ್ಟಿದ್ದನು. ಅವರು ಚಂದ್ರಪುರಕ್ಕೆ ಬಂದ ಮರುದಿವಸವೇ ಬಳವಂತನು ಶಂಕರರಾಯರನ್ನೂ ಅವರ ಮನೆಯವರನ್ನೂ ಮಿಶನ್ನದ ಕೆಲಸನನ್ನು ತೋರಿಸಲಿಕ್ಕೆ ಕರೆದುಕೊಂಡು ಹೋಗಿದ್ದನು. ಶಂಕರರಾಯರು ಮಿಶನ್ನದೊಳಗೆ ಅಡ್ಡಾಡಿ ಹುಡುಗರು ನಿಯಮದಿಂದ ಮಾಡುವ ಎಲ್ಲ ಕೆಲಸಗಳನ್ನೂ ಅವರ ಅಚ್ಚುಕಟ್ಟುತನವನ್ನೂ ನೋಡಿ ಬಳವಂತನನ್ನು ಮುಕ್ತ

ಕಂಠವಾಗಿ ಹೊಗಳಿದರು. " ಈ ಹರಿಜನ ಬಾಲಕರನ್ನು ಸುಶಿಕ್ಷಿತರನ್ನಾಗಿ ಮಾಡಿ ಹಿಂದೂ ಧರ್ಮದ ಉಪದೇಶಾಮೃತವನ್ನು ಅವರಿಗೆ ಮನವಾರೆ ಕುಡಿಸುವದು ಮೇಲ್ತರದ ಸಮಾಜಸೇವೆಯು. ಇದಕ್ಕೆ ನನ್ನ ಪೂರ್ಣ ಸಹಾನುಭೂತಿಯುಂಟು. ನೀವು ಈ ಕೆಲಸವನ್ನು ಜನರ ನಿಂದೆಗೆ ಹೆದರದೆ ಹಾಗೇ ಅವ್ಯಾಹತವಾಗಿ ಸಾಗಿಸಬೇಕು " ಎಂದು ಹೊಸಲಾಗಿ ಶಂಕರ ರಾಯರು ಒಳ್ಳೇ ಮಾತಿನ ಸುರಿಮಳೆಯನ್ನು ಸುರಿಸಿದ್ದರು. ಅವರ ಮಗ ನಾದ ವಿನಾಯಕನೂ ಮಗಳಾದ ಕಮಲಾದೇವಿಯೂ ತಂದೆಯ ಮಾತಿಗೆ ಮನಃಪೂರ್ವಕವಾಗಿ ಅನುಮೋದಿಸಿದರು. ಕಮಲಾದೇವಿಯಂತೂ ಬಳ ವಂತನ ಭಾವನೆಗಳಿಗೂ ಆದರ್ಶಪ್ರಿಯತೆಗೂ ತುಂಬಾ ಮೆಚ್ಚಿ ಕೆಲ ಕಾಲ ವಾದರೂ ಇಂಥ ಸಮಾಜೋಪಕಾರಕವಾದ ಸಂಸ್ಥೆಯಲ್ಲಿ ಅವನೊಂದಿಗೆ ಕೂಡಿಕೊಂಡು ನಿಷ್ಕಾಮ ಬುದ್ಧಿಯಿಂದ ಕೆಲಸ ಮಾಡಬೇಕೆಂದು ಹಂಬಲಿಸಿ ದಳು. ಇದರ ಬಗ್ಗೆ ಅವಳು ಅಣ್ಣನಾದ ವಿನಾಯಕನ ಸಂಗಡ ಮಾತಾಡಿ ಅವನಿಗೆ ಇಷ್ಟವಾದ ವಿಷಯವೆಂದು ಗೊತ್ತುಮಾಡಿಕೊಂಡು ತಂದೆಯ ಅನುಜ್ಞೆಯನ್ನು ಪಡೆಯಲಿಕ್ಕೆ ಮೇಲೆ ಹೇಳಿದಂತೆ ಸಂವಾದವನ್ನು ನಡೆಯಿಸಿ ದ್ದಳು. ಆದರೆ ತಂದೆಯ ವಿರೋಧವನ್ನು ನೋಡಿ ಅವಳಿಗೆ ವಿಸ್ಮಯವೇ ಯುಂಟಾಯಿತು. ಯಾವ ಸಂಸ್ಥೆಯ ಮಹತ್ವವನ್ನು ಮುಂಚಿನ ದಿನವೇ ಶಂಕರರಾಯರು ಕೊಂಡಾಡಿದ್ದರೋ ಅಂಥ ಸಂಸ್ಥೆಯಲ್ಲಿ ತಾನು ಕೆಲವು ದಿವಸ ಕೆಲಸ ಮಾಡಲು ಕೇಳಿದರೆ ಯಾಕೆ ಇಷ್ಟು ಅಡ್ಡಿಯನ್ನು ಮಾಡ ಬೇಕೆಂಬದು ಅವಳಿಗೆ ತಿಳಿಯಲಿಲ್ಲ. ಆದರೂ ಅವಳು ತನ್ನ ಸಂಕಲ್ಪವನ್ನು ಬಿಡಲಿಲ್ಲ.

" ಕಾಕಾ, ಬಳವಂತರಾಯನಂಥ ಧ್ಯೇಯವಾದಿಗೆ ತಾವು ಅಪ್ರತಿಷ್ಠಿತ ನೆಂದು ಅನ್ನುವಿರಲ್ಲ ! ನಿಮ್ಮ ಮಾತು ನನಗೆ ಬಹಳೇ ವಿಚಿತ್ರವಾಗಿದೆ. " ಕಮಲಾದೇವಿಯು ಆಕ್ಷೇಪಿಸಿದಳು.

" ಹೌದು ಹೌದು, ಈ ಬಳವಂತರಾಯನಾಗಲಿ, ರಾಮರಾಯ ನಾಗಲಿ, ಹೊಟ್ಟೆಗಿಲ್ಲದ್ದಕ್ಕೆ ಇಲ್ಲದ್ದೊಂದು ಉಪದ್ವ್ಯಾಪವನ್ನು ಮಾಡುವ ಜನರು. ಇವರು ಈ ಹೊತ್ತು ಒಂದು ಸಂಸ್ಥೆಯನ್ನು ಪ್ರಾರಂಭಿಸುವರು. ನಾಳೆ ಅದರ ಮುಕ್ತಾಯವನ್ನು ಮಾಡಿ ಬಿಡುವರು.

ಸಮಾಜದಲ್ಲಿ ಇವರಿಗೆ ಸ್ಥಿರವಾದ ಸ್ಥಿತಿಯೆಲ್ಲಿದೆ?" ಎಂದು ಶಂಕರರಾಯರು ಹೀಯಾಳಿಸುತ್ತ ಮಾತನಾಡಿದರು.

"ಸ್ಥಿರವಾದ ಸ್ಥಿತಿಯೆಂದರೇನು? ಮನೆಯಲ್ಲಿ ವಿಪುಲವಾಗಿ ದುಡ್ಡಿದ್ದರೆ ಮಾತ್ರ ಸಮಾಜದಲ್ಲಿ ಸ್ಥಿರವಾದ ಪದವಿಯು ಬರುವದೆಂದು ನೀವು ಹೇಳುವಂತೆ ಕಾಣುತ್ತದೆ. ಧನವಂತನೇ ಸಮಾಜದಲ್ಲಿ ಪ್ರತಿಷ್ಠಿತನಾದರೆ, ಅಂಥ ಪ್ರತಿಷ್ಠೆಯು ನನಗೆ ಬೇಡ. ಮೇಲಾಗಿ ನನಗೆ ತಮ್ಮ ದಯದಿಂದ ಹೊಟ್ಟೆಗಾಗಿ ದುಡಿಯುವ ಪ್ರಸಂಗವೂ ಇಲ್ಲ. ಈ ಸಂಸ್ಥೆಯಲ್ಲಿ ಕೆಲಸ ಮಾಡಿದರೆ ನನ್ನ ಪ್ರತಿಷ್ಠೆಗೇನೂ ಬಾಧಕವಿಲ್ಲ" ಎಂದು ಕಮಲೆಯು ತನ್ನ ಮನಸ್ಸಿನ ನಿಶ್ಚಯವನ್ನು ತಿಳಿಸಿದಳು.

"ಈ ಮಿಶನ್ನಿನ ಕೆಲಸವು ಬಹಳ ದೊಡ್ಡದು. ಈ ಕೆಲಸಕ್ಕೆ ಅನೇಕ ಜನರ ಸಹಕಾರವೂ, ದುಡ್ಡಿನ ಸಹಾಯವೂ ಬೇಕು. ಇಂಥ ಸಂಸ್ಥೆಗಳು ನಮ್ಮ ದೇಶದ ಅನೇಕ ಪಟ್ಟಣಗಳಲ್ಲಿ ಹೊರಟರೆ ಮಾತ್ರ ಈ ಮಹಾ ಕಾರ್ಯವು ಕೈಗೂಡುವದು. ಇಂಥ ಒಂದು ಸಂಸ್ಥೆಯಿಂದಾಗಲಿ ಒಬ್ಬ ಬಳವಂತನಿಂದಾಗಲಿ ಏನಾಗಬಲ್ಲದು? ಮನೆಗೆ ಬೆಂಕಿ ಹತ್ತಿದಾಗ ಅದರ ಮೇಲೆ ಒಂದು ಹನಿ ನೀರು ಚಿಮುಕಿಸಿದ ಹಾಗೆ" ಎಂದು ಅನ್ನುತ್ತ ಶಂಕರರಾಯರು ತಮ್ಮ ಮಗಳ ಮನಸ್ಸನ್ನು ಕೃತಸಂಕಲ್ಪದಿಂದ ತಿರುಗಿಸಲಿಕ್ಕೆ ಹವಣಿಸಿದರು.

"ಅನೇಕ ಜನರು ಕೂಡಿಕೊಂಡು ಇಂಥ ಉಪಯುಕ್ತ ಕಾರ್ಯವನ್ನು ಮಾಡುವವಲ್ಲೆಂದು ಒಬ್ಬರೂ ಆರಂಭವನ್ನೇ ಮಾಡಬಾರದೇ? ಒಂದು ವೇಳೆಗೆ ಅನೇಕ ಸಂಸ್ಥೆಗಳು ಹೊರಡದಿದ್ದರೆ ಇಲ್ಲ. ಒಂದು ಸಂಸ್ಥೆಯನ್ನಾದರೂ ಚನ್ನಾಗಿ ನಡೆಯಿಸಿ ಅದರ ಉಪಯುಕ್ತತೆಯನ್ನು ಜನತೆಗೆ ತೋರಿಸಿ ಕೊಟ್ಟರೆ ಇಂಥ ಅನ್ಯ ಸಂಸ್ಥೆಗಳು ಹೊರಡಲಿಕ್ಕೆ ಉತ್ತೇಜನವಾದೀತು? ಏನೂ ಮಾಡದೆ ಸುಮ್ಮನೆ ನಮ್ಮ ನಮ್ಮ ಕುಟುಂಬಭರಣವನ್ನು ಮಾಡುವದು ಯಾವ ದೊಡ್ಡ ಪೌರುಷವು?" ಎಂದು ಕಮಲೆಯು ತನ್ನ ನಿಶ್ಚಯವನ್ನು ಸಾಧಿಸಿದಳು.

"ನನಗೇನೋ ಈ ಸಂಸ್ಥೆಯ ಸ್ಥೈರ್ಯದ ಬಗ್ಗೆ ತುಂಬಾ ಸಂಶಯವಾಗಿದೆ. ಆದ್ದರಿಂದ ಈ ಸಂಸ್ಥೆಯು ಒಂದು ವರ್ಷದವರೆಗೆ ಸುಸೂತ್ರವಾಗಿ

ನಡೆದರೆ, ಮುಂದೆ ಅದನ್ನು ಸೇರುವ ವಿಚಾರ ಮಾಡಬಹುದು. ಅಲ್ಲಿಯ ತನಕ ನೀನು ಈ ಮಾತನ್ನೇ ಎತ್ತಕೂಡದು. ತಿಳಿಯಿತೇ ? ' ಎಂದು ಶಂಕರ ರಾಯರು ಗದ್ದರಿಸಿದರು.

ತಂದೆಯ ಸಿಟ್ಟನ್ನೂ ಹಠವಾದಿತ್ವವನ್ನೂ ನೋಡಿ ಕಮಲಾದೇವಿಯ ಕಣ್ಣುಗಳಲ್ಲಿ ನೀರು ತುಂಬಿಬಂದವು. ಕೂಡಲೆ ಆಕೆ ತನ್ನ ಕೋಣೆಯೊಳಗೆ ಹೋಗಿ ಬಾಗಿಲು ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅಳಹತ್ತಿದಳು. ಇದು ಸ್ವಲ್ಪ ವೇಳೆಯಲ್ಲಿ ಅವಳ ತಾಯಿಯಾದ ಪಾರ್ವತೀಬಾಯಿಗೆ ಗೊತ್ತಾಯಿತು. ಅವಳೂ ಮಗಳಿಗೆ ಈ ವಿಚಾರವನ್ನು ಬಿಡಲಿಕ್ಕೆ ಹೇಳಿ ನೋಡಿದಳು. ಆದರೆ ಆಕೆಯ ಸಂಕಲ್ಪವು ದೃಢವಾದದ್ದನ್ನು ಅರಿತವಳಾಗಿ ಸಮಯವನ್ನು ಸಾಧಿಸಿ ತನ್ನ ಗಂಡನಿಗೆ– " ಕಮಲೆಯು ಚಿಕ್ಕವಳಲ್ಲ. ಪ್ರಬುದ್ಧಳಾಗಿದ್ದಾಳೆ. ಮೇಲಾಗಿ ಆಕೆಗೆ ವಿದ್ಯೆಯನ್ನು ಕಲಿಸಿದ್ದೀರಿ. ಅವಳ ಮನಸ್ಸಿನ ವಿರುದ್ಧವಾಗಿ ತಾವು ಹೋಗಬಾರದು. ವಿಪರೀತ ಪರಿಣಾಮವಾದೀತು. ಕೆಲವು ದಿವಸ ಮಿಶನ್ನದಲ್ಲಿ ಕೆಲಸ ಮಾಡವಲ್ಲಳ್ಳೀಕೆ. ಆ ಪಂಚಮ ಹುಡುಗರೊಳಗೆ ಕೆಲವು ದಿವಸ ಅಡ್ಡಾಡಿದ ಮೇಲೆ ಅವಳಿಗೇ ಆ ಕೆಲಸದ ಬಗ್ಗೆ ಹೇಸಿಕೆಯೂ ಬೇಸರಿಕೆಯೂ ಬಂದು ಅವಳು ಅದನ್ನು ಬಿಡುವದೇ ನಿಶ್ಚಯ " ಎಂದು ಹೇಳಿ ಗಂಡನನ್ನು ಒಡಂಬಡಿಸಿದಳು.

ಈ ಪ್ರಕಾರ ಮಾತಿನ ಅರೆದಾಟವಾದ ಮೇಲೆ ಕಮಲಾದೇವಿಯು ಮಿಶನ್ನಿಗೆ ಹೋಗಹತ್ತಿದಳು. ಅವಳಿಗೆ ಸಣ್ಣ ಮಕ್ಕಳಿಗೆ ಕಲಿಸುವದರ ಮೇಲೆ ಪ್ರೀತಿ ಬಹಳ. ಸ್ವಲ್ಪ ದಿವಸಗಳಲ್ಲಿ ಅವಳು ಮಿಶನ್ನದ ಹುಡುಗರ ಪ್ರೀತಿಗೂ ಮನ್ನಣೆಗೂ ಪಾತ್ರಳಾದಳು. ಅವಳು ಬಂದದ್ದರಿಂದ ಬಳವಂತನ ಕೆಲಸವು ಎಷ್ಟೋ ಹಗುರಾಯಿತು. ಅವನು ಸಮೀಪದ ಊರುಗಳಿಗೆ ಹೋಗಿ ಮತ್ತೆ ಹತ್ತು ಹದಿನೈದು ಅನಾಥ ಬಾಲಕರನ್ನು ಕರೆದುಕೊಂಡು ಬಂದನು. ಮಿಶನ್ನದ ಕಾರ್ಯಕ್ಷೇತ್ರವು ಬೆಳೆಯಹತ್ತಿತು. ಹಿಂದೂ ಧರ್ಮದ ಸರ್ವಾಂಗ ಸುಂದರವಾದ, ವ್ಯಾಪಕವಾದ, ವಿಶ್ವಬಂಧುತ್ವದ ತತ್ವಗಳನ್ನು ಜನಸಾಮಾನ್ಯರ ಮುಂದೆ ತಿಳಿಮಾತಿನಲ್ಲಿ ಮಂಡಿಸುವದು – ಅಜ್ಞಾನದಿಂದ ಹಿಂದೂ ಧರ್ಮ ಬಿಟ್ಟು ಪರಧರ್ಮದೊಳಗೆ ಸೇರಿದವರಿಗೆ ಅವರ ಇಚ್ಛಾನು

ಸಾರವಾಗಿ ಶುದ್ಧೀಕರಣದೊಂದಿಗೆ ಹಿಂದೂ ಧರ್ಮದೊಳಗೆ ಸೇರಿಸಿ ಹಿಂದೂ ಸಮಾಜದೊಳಗೆ ಅವರಿಗೆ ಯೋಗ್ಯವಾದ ದರ್ಜೆಯು ಸಿಗುವಂತೆ ಮಾಡುವದು — ಹಿಂದೂ ಧರ್ಮೀಯರ ಅನಾದರದಿಂದ ಬೇಸತ್ತು ಅಸ್ಪೃಶ್ಯರು ಪರಧರ್ಮದೊಳಗೆ ಸೇರಲು ಹವಣಿಸುತ್ತಿದ್ದರೆ ಅವರಿಗೆ ಧೈರ್ಯ ಹೇಳಿ ಯೋಗ್ಯ ಸಹಾಯ ಮಾಡಿ ಹಿಂದೂ ಸಮಾಜದಲ್ಲಿ ಅವರಿಗೆ ಉಚಿತವಾದ ಸ್ಥಾನವು ಸಿಗುವಂತೆ ಏರ್ಪಾಡು ಮಾಡುವದು — ಅನಾಥ ಹಿಂದೂ ಬಾಲಕರಿಗೆ ಅನ್ನ, ವಸ್ತ್ರ, ಶಿಕ್ಷಣ ಮೊದಲಾದವುಗಳನ್ನು ಒದಗಿಸಿ ಹಿಂದೂ ಸಮಾಜವನ್ನು ರಕ್ಷಿಸುವದು, ಹೀಗೆ ಅನೇಕ ಕಾರ್ಯಕಲಾಪಗಳು ಮಿಶನ್ನದ ಮುಂದೆ ಇದ್ದವು. ಕಮಲಾದೇವಿಯು ಬಂದದ್ದರಿಂದ ಪ್ರಸಂಗ ಬಂದಾಗ ಮಿಶನ್ನದ ಕೆಲಸವನ್ನು ಅವಳಿಗೆ ಒಪ್ಪಿಸಿ ಬಳವಂತರಾಯನಿಗೆ ಹೊರಗಿನ ಕೆಲಸವನ್ನು ನೋಡಿಕೊಳ್ಳಲಿಕ್ಕೆ ಅನುವಾಯಿತು.

ಬಾಳಾಸಾಹೇಬರೂ ನರ್ಮದಾಬಾಯಿಯೂ ಇಬ್ಬರೂ ಮಿಶನ್ನದ ಮಂದಿರದಲ್ಲಿಯೇ ಇರುತ್ತಿದ್ದರು. ರಾಮರಾಯನು ಗೋಶಾಲೆಯ ಕೆಲಸವನ್ನು ಮಧ್ಯಾಹ್ನದವರೆಗೆ ತೀರಿಸಿಕೊಂಡು ಆದಷ್ಟು ವೇಳೆಯನ್ನು ಮಿಶನ್ನದಲ್ಲಿಯೇ ಕಳೆದು ಹುಡುಗರಿಗೆ ಪಾಠಗಳನ್ನು ಹೇಳುತ್ತಿದ್ದನು. ಅವನ ಪತ್ನಿಯಾದ ಶಾರದಾಬಾಯಿಯೂ ಬಳವಂತನ ತಾಯಿಯಾದ ರಾಧಾಬಾಯಿಯೂ ತಮ್ಮ ಮನೆಯ ಕೆಲಸಬೊಗಸೆಗಳನ್ನು ತೀರಿಸಿಕೊಂಡು ಬಂದು ಮಂದಿರ ವಸತಿಗೃಹದ ವ್ಯವಸ್ಥೆಯಲ್ಲಿ ನೆರವಾಗುತ್ತಿದ್ದರು. ದಿನಾಲು ಮುಂಜಾನೆ ಸಂಜೆ ಪ್ರಾರ್ಥನೆಯ ಹಾಡುಗಳನ್ನು ಹೇಳುವ ಕೆಲಸವು ಕಮಲಾದೇವಿಯದು. ಅವಳು ತನ್ನ ಸ್ವರ್ಗೀಯವಾದ ಸುಸ್ವರದಿಂದ ಹಾಡಲಿಕ್ಕೆ ಹತ್ತಿದಳೆಂದರೆ ಎಲ್ಲ ಕಡೆಗೂ ಭಕ್ತಿಯ ಪವಿತ್ರ ವಾತಾವರಣವು ಹರಡಿಕೊಳ್ಳುತ್ತಿತ್ತು. ಹುಡುಗರಿಗೆ ಅವಳನ್ನು ಕಂಡರೆ ತಾಯಿಯನ್ನು ಕಂಡಂತೆ ಅಕ್ಕರತೆ — ಹಿಗ್ಗು. ಅವಳ ಮನಸ್ಸಿನ ಪಾವಿತ್ರ್ಯವು ಹುಡುಗರ ಮನಸ್ಸಿನೊಳಗಿನ ಕೊಂಕುಗಳನ್ನು ಸಮಮಾಡಿತು; ಅಲ್ಲಿ ಪ್ರೇಮ ವಿಶ್ವಾಸಗಳನ್ನು ನೆಲೆಗೊಳಿಸಿತು; ಉದಾತ್ತ ಜೀವನದ ಗಾಳಿಯನ್ನು ಅವರ ಅಂತಃಕರಣಗಳ ಮೇಲೆ ಬೀಸಿತು.

ಮುಂದೆ ಬೇಸಿಗೆಯ ವಿರಾಮ ಕಾಲವು ಮುಗಿಯಲು, ಶಂಕರರಾಯರು ತಮ್ಮ ಮನೆಯ ಜನರೊಂದಿಗೆ ಮುಂಬಯಿಗೆ ತೆರಳಬೇಕಾಗಿತ್ತು. ಆದರೆ ಕಮಲಾದೇವಿಯನ್ನು ಬಿಟ್ಟು ಹೋಗುವದು ಅವರ ಮನಸ್ಸಿಗೆ ಬರಲಿಲ್ಲ. ಆದ್ದರಿಂದ ಹೇಗಾದರೂ ಮಾಡಿ ಅವಳನ್ನು ಮಿಶನ್ನು ಬಿಡಿಸಿ ಕರೆದುಕೊಂಡು ಹೋಗಬೇಕಾಗಿತ್ತು. ಆದರೆ ಕಮಲಾದೇವಿಯ ಮನಸ್ಸಿನಲ್ಲಿ ಇಷ್ಟು ಬೇಗನೇ ಮಿಶನ್ನದ ಕಾರ್ಯವನ್ನು ಬಿಟ್ಟು ಹೋಗಿ ಮುಂಬಯಿಯಲ್ಲಿ ಮಾಡುವದಾದರೂ ಏನು? ಎಂದೆನಿಸಿತು. ಮಿಶನ್ನದ ಕಾರ್ಯವು ಅವಳ ಅಂತಃಕರಣವನ್ನು ಪೂರ್ಣವಾಗಿ ಆಕರ್ಷಿಸಿತ್ತು. ಮೇಲಾಗಿ ಆದರ್ಶ ಜೀವನಕ್ಕೆ ದೇಹಮನಸ್ಸುಗಳನ್ನು ಅರ್ಪಿಸಿದ ಸ್ತ್ರೀಪುರುಷರ ಆನಂದದಾಯಕವಾದ ಸಮಾಗಮವು ಅವಳಿಗೆ ದೈವಯೋಗದಿಂದ ಲಭಿಸಿತ್ತು. ಇಂಥ ಜನರೊಳಗಿದ್ದುಕೊಂಡು ಒಳ್ಳೇ ಕಾರ್ಯದಲ್ಲಿ ವೇಳೆಯನ್ನು ಕಳೆಯುತ್ತಿರಲು ಅವಳ ಜೀವನದಲ್ಲಿ ಒಂದು ಅಪೂರ್ವವಾದ ಅಮೃತದ ಸೊನೆಯು ಬೆರೆತುಕೊಂಡಿತ್ತು. ಸಮಾನಶೀಲರಾದ ಸಮಾನ ಧ್ಯೇಯವುಳ್ಳ ಜನರ ಸಮಾಗಮವೇ ಅಷ್ಟು ಪ್ರಭಾವವುಳ್ಳದ್ದು. ಇದಲ್ಲದೆ ಬಳವಂತರಾಯನನ್ನು ಮೊದಲು ನೋಡಿದಾಗಿನಿಂದ ಅವಳ ಹೃದಯದಲ್ಲಿ ಪ್ರೇಮವು ಅಂಕುರಿಸಿ ಈಗ ಅದು ಚನ್ನಾಗಿ ವಿಕಾಸವನ್ನು ಹೊಂದುತ್ತ ನಡೆದಿತ್ತು. ಇಂಥ ಸನ್ನಿವೇಶದಲ್ಲಿ ಮಿಶನ್ನು ಬಿಟ್ಟು ಹೋಗುವ ವಿಚಾರವು ಅವಳಿಗೆ ಬಹಳ ಅಸಹ್ಯವಾಗಿತ್ತೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ಒಂದು ದಿವಸ ಸಂಜೆಯ ಆರು ಘಂಟೆಯ ಸಮಯ. ಅಸ್ತೋನ್ಮುಖನಾದ ಸೂರ್ಯನ ಕಿರಣಗಳು ಮಂದಿರದ ಗಿಡಗಳ ಮೇಲೆ ತಮ್ಮ ರಕ್ತಚ್ಛಾಯೆಯನ್ನು ಚಲ್ಲುತ್ತಿದ್ದುವು. ಹುಡುಗರು ಮಿಶನ್ನದ ಹೊರಗಿನ ಬೈಲಿನಲ್ಲಿ ಆಟವಾಡುತ್ತಿದ್ದರು. ನರ್ಮದಾಬಾಯಿಯೂ ರಾಧಾಬಾಯಿಯ ಸಂಗಡ ಮಾತಾಡುತ್ತ ಮಂದಿರದ ಮುಂದಿನ ಕಮಾನಿನಲ್ಲಿ ಕಲ್ಲು ಕಟ್ಟೆಯ ಮೇಲೆ ಕುಳಿತಿದ್ದಳು. ಕಮಲಾದೇವಿಯು ನರ್ಮದೆಯ ಒಂದು ವರ್ಷದ ಮಗುವಾದ ವಸಂತನನ್ನೆತ್ತಿಕೊಂಡು ತೋಟದ ಒಂದು ಮೂಲೆಯಲ್ಲಿ ಬಾಕಿನ ಮೇಲೆ ಕುಳಿತಿದ್ದಳು. ವಸಂತನ ಮೇಲೆ ಅವಳದು ಬಹಳ ಪ್ರೀತಿ. ಅವನನ್ನು ಕಂಡರೆ ಮುದ್ದಾಡದೆ ಬಿಡುತ್ತಿದ್ದಿಲ್ಲ. ಅವನನ್ನು ಆಡಿಸುತ್ತ ಅವನ ನಿರ್ನಿಮಿತ್ತ

ವಾಸ ನಗೆಯನ್ನು ನೋಡಿ ತಾನೂ ನಲಿದಾಡುತ್ತ ಅವಳು ಅಲ್ಲಿ ಕೂತು ಕೊಂಡಿದ್ದಳು. ಮಂದಿರದಲ್ಲಿ ಗಂಡಸರಾರೂ ಇದ್ದಿಲ್ಲ. ಎಲ್ಲರೂ ಹುಡುಗ ರೊಡನೆ ಆಟದ ಬೈಲಿನಲ್ಲಿದ್ದರು. ಬಳವಂತನು ತನ್ನ ಮಿತ್ರನಾದ ವಿನಾಯ ಕನ ಭೆಟ್ಟಿಗಾಗಿ ಹೋಗಿದ್ದನು; ಅವನು ಇಷ್ಟರಲ್ಲಿಯೇ ಮಂದಿರಕ್ಕೆ ತಿರುಗಿ ಬಂದನು. ತೋಟದ ಒಂದು ಭಾಗದಲ್ಲಿ ಮಗುವನ್ನಾಡಿಸುತ್ತ ಕೂತು ಕೊಂಡಿದ್ದ ಕಮಲಾದೇವಿಯು ಅವನಿಗೆ ಕಾಣಿಸಲು ಅವನು ನೆಟ್ಟಗೆ ಅಲ್ಲಿಗೆ ಹೋದನು. ಅವನನ್ನು ನೋಡಿದ ಕೂಡಲೆ ಕಮಲೆಯು ಕೂಡಲೆ ನಾಚಿಕೆ ಯಿಂದ ತನ್ನ ಸೆರಗನ್ನು ಸಾವರಿಸುತ್ತ ಎದ್ದು ನಿಂತಳು. ಹೀಗೆ ಏಕಾಂತ ದಲ್ಲಿ ಇಬ್ಬರಿಗೂ ಹಿಂದಕ್ಕೆ ಎಂದಿಗೂ ಭೆಟ್ಟಿಯಾಗಿದ್ದಿಲ್ಲ. ಇಬ್ಬರ ದೃಷ್ಟಿಗಳು ಒಂದನ್ನೊಂದು ಕೂಡಿದುವು. ಇಬ್ಬರಿಗೂ ಪರಸ್ಪರ ಪ್ರೇಮದ ಬಗ್ಗೆ ತುಂಬಾ ಮನವರಿಕೆಯಾಯಿತು. ಕೂಡಲೆ ಬಳವಂತನು–"ಕಮಲಾದೇವಿ ಯವರೇ, ನಿಮ್ಮ ಏಕಾಂತವನ್ನು ಭಂಗ ಮಾಡಿದ್ದಕ್ಕೆ ಕ್ಷಮಿಸಿರಿ. ತಮ್ಮ ಕಡೆಗೆ ಮಹತ್ವದ ಕೆಲಸವಿದ್ದುದರಿಂದ ಬಂದೆ."

ಕಮಲಾ–"ಮಗುವನ್ನಾಡಿಸುತ್ತ ಕೂತಿದ್ದೆ. ಏನೂ ಅಡ್ಡಿಯಿಲ್ಲ. ತಮ್ಮ ಕೆಲಸವೇನು? ಹೇಳಬಹುದು."

ಬಳವಂತ–"ನೀವು ನಮ್ಮನ್ನು ಬಿಟ್ಟು ತೀವ್ರವೇ ಹೋಗುವಿರೆಂದು ಕೇಳಿ ನನಗೆ ಬಹಳ ಹಳಹಳಿಯಾಗಿದೆ. ನಿಮ್ಮಿಂದ ನಮ್ಮ ಸಂಸ್ಥೆಗೆ ಬಹಳ ಉಪಯೋಗವಿತ್ತು. ನಿಮ್ಮಂಥವರು ನಮ್ಮ ಸಂಸ್ಥೆಗೆ ಬೇಕಾಗಿತ್ತು."

ಕಮಲಾ–"ನಾನು ಹೋಗುವೆನೆಂದು ನಿಮಗೆ ಯಾರು ಹೇಳಿದರು?"

ಬಳವಂತ–"ಇದೇ ಈಗ ನಿಮ್ಮ ಅಣ್ಣನೇ ಹೇಳಿದನು. ಶಂಕರ ರಾಯರು ನಿಮ್ಮನ್ನು ಕರೆದುಕೊಂಡು ಹೋಗುವ ನಿಶ್ಚಯ ಮಾಡಿದ್ದಾರಂತೆ."

ಕಮಲಾ–"ತಂದೆಯವರು ಬರಲೇಬೇಕೆಂದು ಹೇಳಿದರೆ ನಾನು ಇಲ್ಲಿ ಒಬ್ಬಳೇ ಉಳಿಯುವದು ಕಠಿಣವೇ ಸರಿ."

ಬಳವಂತ–"ಅದೇಕೆ? ನಾನಿದ್ದ ಮೇಲೆ ನಿಮಗೆ ಇಲ್ಲಿ ಸಂಕೋಚ ವೇನು?"

ಈ ಮಾತು ಕೇಳಿ ಕಮಲಾದೇವಿಯು ನಾಚಿಕೆಯಿಂದ ಮೋರೆಯನ್ನು ಬೇರೆ ಕಡೆಗೆ ತಿರುಗಿಸಿದಳು. ಅವಳ ಮನಸ್ಸಿನಲ್ಲಿ ಭಾವೀ ಜೀವನದ ಅನೇಕ ಕಲ್ಪನೆಗಳು ಒಂದರ ಹಿಂದೊಂದು ಬಂದು ಅವಳಿಗೆ ಒಂದು ಕ್ಷಣ ಹೊತ್ತು ಜಗತ್ತನ್ನೇ ಮರೆಯಿಸಿ ಬಿಟ್ಟವು. ಅವಳ ಎದೆಯಲ್ಲಿ ಒಂದು ವಿಲಕ್ಷಣವಾದ ಧೈರ್ಯವೂ ವಿಶ್ವಾಸವೂ ತಲೆದೋರಿದುವು. ಕೂಡಲೆ ಅವಳು— " ನಾನು ಈ ಸಂಸ್ಥೆಯನ್ನು ಬಿಟ್ಟು ಹೋಗುವದೇ ಇಲ್ಲ. ಇದರಲ್ಲಿ ನಾನು ಯಾರ ಮಾತನ್ನೂ ಕೇಳುವದಿಲ್ಲ" ಎಂದು ನಿಶ್ಚಯಸೂಚಕವಾದ ಧ್ವನಿಯಿಂದ ಉಸುರಿದಳು.

ಬಳವಂತ— " ನಿಮ್ಮ ತಂದೆತಾಯಿಯವರು ಹಟ ಹಿಡಿದರೆ ಈ ನಿಮ್ಮ ನಿಶ್ಚಯವು ಕಡೆತನಕ ಉಳಿಯಲಿಕ್ಕಿಲ್ಲ. ಆದ್ದರಿಂದಲೇ ನನಗೆ ಬಹಳ ಅಧೈರ್ಯವಾಗಿದೆ."

ಕಮಲಾದೇವಿ— " ನಿಮಗೆ ಏನೂ ಅಧೈರ್ಯ ಬೇಡ. ನನ್ನ ನಿಶ್ಚಯವು ಸ್ಥಿರವಾಗಿದೆ."

ಬಳವಂತ— " ಹಾಗಾದರೆ 'ಇಲ್ಲಿ ಉಳಿಯುವದು ಕಠಿಣವೇ ಸರಿ' ಎಂದು ಇದೇ ಈಗ ಹೇಳಿದಿರಲ್ಲ! ಅದು ಹೇಗೆ?"

ಕಮಲಾದೇವಿಯು ಒಂದು ಕ್ಷಣ ಮಾತ್ರದಲ್ಲಿಯೇ ನಡೆದು ಹೋದ ವಿಚಾರಗಳ ಬಿರುಗಾಳಿಯನ್ನೂ ತನ್ನ ಎದೆಯೊಳಗಿನ ಗುಟ್ಟನ್ನು ಹೊರಗೆ ಹಾಕಿದ್ದನ್ನೂ ನೆನೆದು ನಾಚಿಕೆಯಿಂದ ದಿಗ್ಭ್ರಾಂತಳಾದಳು. ಇನ್ನು ಈ ವಿಷಯವನ್ನು ಇಷ್ಟಕ್ಕೇ ಮುಗಿಸಬೇಕೆಂದು " ಅದೇನೋ ನನಗೆ ಒಂದೂ ತಿಳಿಯದು" ಎಂದು ಹೇಳುತ್ತ ಲಗುಬಗೆಯಿಂದ ಎದ್ದು ಆ ಸ್ಥಳದಿಂದ ಹೊರಟು ಹೋಗಿ ಉಳಿದ ಹೆಂಗಸರನ್ನು ಕೂಡಿಕೊಂಡಳು. ತನ್ನ ಎದೆಯೊಳಗಿನ ಭಾವನೆಗಳ ಗಲಾಟೆಯಲ್ಲಿ ಆಕೆ ನರ್ಮದೆಯ ಕೂಸನ್ನು ಅಲ್ಲಿಯೇ ಬಿಟ್ಟು ಹೋದಳು. ಇದನ್ನು ನೋಡಿ ನರ್ಮದೆಯು— " ಕಮಲಾ, ವಸಂತನೆಲ್ಲಿ?" ಎಂದು ಕೇಳಿದಳು.

ಕಮಲೆಯು— " ವಸಂತನೇ? ಓಹೋ! ಹೌದು. ಅವನನ್ನು ಅವರ ಕೈಯಲ್ಲಿಯೇ ಕೊಟ್ಟು ಬಂದೆ."

ನರ್ಮದೆ— " ಅವರೆಂದರೆ ಯಾರು?

ಕಮಲೆ ತಾನು ಪ್ರಮಾದದಿಂದ ನುಡಿದ ಶಬ್ದವನ್ನು ತಿರುಗಿ ತಕ್ಕೊಳ್ಳ ಬಯಸಿ, ನಾಲಗೆಯನ್ನು ಕಚ್ಚಿ—" ಅಲ್ಲ, ಅಲ್ಲ, ಬಳವಂತರಾಯರು ಅಲ್ಲಿಯೇ ಬಂದರು. ಅವರ ಕೈಯಲ್ಲಿ ಕೊಟ್ಟು ಬಂದೆ " ಎಂದು ಹೇಳಿದಳು.

ಬಳವಂತರಾಯರ ಮನಸ್ಸಿನಲ್ಲಿಯೂ ಕಮಲಾದೇವಿಯ ಮನಸ್ಸಿನಲ್ಲಿಯೂ ನಡೆದ ಪ್ರೇಮದ ವಿಕಾಸವು ಉಳಿದ ಹೆಣ್ಣುಮಕ್ಕಳಿಗೆ ಇಷ್ಟರೊಳಗಾಗಿಯೇ ಹೊಳೆದುಬಿಟ್ಟಿತ್ತು. ಈಗ ಅವರ ಕಲ್ಪನೆಯು ದೃಢವಾಯಿತು. ಆದರೆ ಈ ವಿಷಯವನ್ನು ಕುರಿತು ಅವರು ಮುಂದೆ ಮಾತು ಬೆಳಿಸಲಿಲ್ಲ.

ಸಂಜೆಯಾಗುತ್ತ ಬರಲು ಕಮಲಾದೇವಿಯು ಮನೆಗೆ ಹೋದಳು. ಅವಳ ಮುಖವು ಬಹಳ ಗಂಭೀರವಾಗಿ ಒಳಗೆ ನಡೆದ ವಿಚಾರಗಳ ತಾಕಲಾಟವನ್ನು ಸೂಚಿಸುತ್ತಿತ್ತು. ಅವಳು ಯಾರ ಸಂಗಡಲೂ ಮಾತನಾಡಲಿಲ್ಲ. ಅವಳ ಕೂಡ ಮಾತನಾಡಬೇಕೆಂದು ಬಹಳ ಹೊತ್ತಿನವರೆಗೆ ಹವಣಿಸುತ್ತಿದ್ದ ಶಂಕರರಾಯರಿಗೆ ವಿಷಯಕ್ಕೆ ಹೇಗೆ ಮೊದಲು ಮಾಡಬೇಕೆಂಬದೇ ತೋರಲಿಲ್ಲ. ಮೌನವ್ರತದಿಂದ ಊಟವಾಯಿತು. ಊಟವಾದಕೂಡಲೆ ಕಮಲೆಯು ತನ್ನ ಕೋಣೆಯೊಳಗೆ ಹೋಗಿ ಬಾಗಿಲು ಹಾಕಿಕೊಂಡಳು. ತನ್ನ ಸಂಗಡ ದಿನಾಲು ಆ ಮಾತು ಈ ಮಾತು ತೆಗೆದು ನಗುತ್ತ ಕೆಲೆಯುತ್ತ ಕಾಲ ಕಳೆಯುವ ಕಮಲಾದೇವಿಯ ರೀತಿಯನ್ನು ನೋಡಿ ತಾಯಿಯು ಗಾಬರಿಯಾದಳು. ಮುಂದೆ ಎಷ್ಟೋ ಹೊತ್ತಿನ ಮೇಲೆ ಶಂಕರರಾಯರು " ಕಮಲಾ " ಎಂದು ಒದರಿದರು. ಎರಡು ಮೂರು ಸಾರೆ ಒದರಿದರೂ ಉತ್ತರವೇ ಬರಲಿಲ್ಲ. ಆ ಮೇಲೆ ತಾವೇ ಎದ್ದು ಅವಳ ಕೋಣೆಯ ಬಾಗಿಲ ಹತ್ತರ ನಿಂತು ಕರೆದರು. ಆಗ ಆಕೆ ಹೊರಗೆ ಬಂದು ಸುಮ್ಮನೆ ತಂದೆಯ ಮೋರೆ ನೋಡುತ್ತ ನಿಂತಳು. ಆಗ ಶಂಕರರಾಯರು ಮಾತಿಗೆ ಮೊದಲು ಮಾಡಿದರು.

" ಕಮಲಾ, ನಾಳೆ ನಾವೆಲ್ಲರೂ ಮುಂಬಯಿಗೆ ಹೋಗತಕ್ಕದ್ದು. ನಿನ್ನ ಸಾಮಾನುಗಳ ಸಿದ್ಧತೆಯನ್ನು ಮಾಡಿಕೋ. "

ಕಮಲಾದೇವಿ ' ನೆಲದ ಕಡೆಗೇ ನೋಡುತ್ತ ಘಟ್ಟಿಯಾದ ಮನಸ್ಸಿನಿಂದ ಮಾತನಾಡಿದಳು.

'ಅಣ್ಣಾ, ನಾನು ಬರುವದಿಲ್ಲ. ಈ ವಿಶಶ್ನದಲ್ಲಿ ಇನ್ನೂ ಕೆಲವು ದಿವಸ ಕೆಲಸ ಮಾಡಲು ಉಳಿಯಬೇಕೆಂದು ಮಾಡಿದ್ದೇನೆ. "

ಶಂಕರರಾವ– "ಆದಾಗದು. ನೀನು ಇಷ್ಟು ದಿವಸ ಕೆಲಸ ಮಾಡಿದ್ದೇ ಸಾಕು."

ಕಮಲಾದೇವಿ– "ಅದೇಕೆ?"

ಶಂಕರರಾವ– "ಇಂಥ ದರಿದ್ರರ ಸಂಗತಿಯೇ ನಿನಗೆ ಬೇಡ. ಹೊಟ್ಟೆಗಾಗಿ ಏನೋ ಘಟಾಟೋಪವನ್ನು ನಡೆಯಿಸಿದ ಈ ಬಳವಂತರಾಯನಂಥ ಜನರ ಸಹವಾಸವು ನಮ್ಮ ದರ್ಜೆಗೆ ತಕ್ಕದ್ದಲ್ಲ."

ಕಮಲಾದೇವಿ– "ಅಣ್ಣಾ, ನನಗೆ ತಮ್ಮ ವಿಚಾರವು ಏನೂ ಸರಿಬೀಳುವದಿಲ್ಲ. ಈ ಬಳವಂತರಾಯನು ಒಡವನಾದರೂ ಅವನ ಜೀವನವು ಆದರ್ಶತೆಯಿಂದ ತುಂಬಿದೆ. ಅಣ್ಣಾ, ಇಷ್ಟೇಕೆ? ನಾನು ಅವನನ್ನೇ ಮದುವೆಯಾಗಬೇಕೆಂದಿದ್ದೇನೆ."

ಶಂಕರರಾವ– "ಕಮಲಾ, ಇದು ಆಗದ ಮಾತು. ಇಂಥ ಹುಚ್ಚುತನವನ್ನು ನೀನು ಬಿಟ್ಟುಬಿಡಲಿಕ್ಕೆಬೇಕು. ನಿನಗೆ ಈ ಜನರ ಸಂಸ್ಥೆಗೆ ಹೋಗಗೊಟ್ಟದ್ದೇ ತಪ್ಪು. ಆದಿರಲಿ, ನೀನು ನಾಳೆ ನಮ್ಮ ಸಂಗಡ ಹೊರಡಲೇಬೇಕು. ಎರಡನೇ ಮಾತು ಬೇಡ" ಎಂದು ಗದ್ದರಿಸಿದರು.

ಕಮಲಾದೇವಿಗೆ ಅಳುವು ತಡೆಯದಾಯಿತು. ಅವಳು ಕೂಡಲೆ ಕೋಣೆಯೊಳಗೆ ಹೋಗಿ ತನ್ನ ಹಾಸಿಗೆಯ ಮೇಲೆ ಮಲಗಿಕೊಂಡು ಬಿಕ್ಕಿ ಬಿಕ್ಕಿ ಅಳಹತ್ತಿದಳು.

ಪಾರ್ವತೀಬಾಯಿಯು ತಂದೆ ಮಕ್ಕಳ ನಡುವೆ ನಡೆದ ಈ ಸಂಭಾಷಣವನ್ನು ಆಚೆಯ ಕೋಣೆಯಲ್ಲಿ ಕುಳಿತುಕೊಂಡು ಕೇಳಿದ್ದಳು. ಅವಳು ಕೂಡಲೆ ಗಂಡನ ಹತ್ತರ ಬಂದು, "ಮಗಳ ಮನಸ್ಸಿನ ವಿರುದ್ಧವಾಗಿ ನಡೆಯಬಾರದು. ಅವಳು ಪ್ರೌಢಳಾಗಿದ್ದಾಳೆ. ಅವಳು ಇನ್ನೂ ಹುಡುಗಿಯಲ್ಲ" ಎಂದು ಅನೇಕ ರೀತಿಯಿಂದ ಹೇಳಿ ನೋಡಿದರು. ತನ್ನ ಕೋಣೆಯೊಳಗಿಂದ ವಿನಾಯಕನೂ ಬಂದು ತಾಯಿಯ ಮಾತಿಗೆ ಪುಷ್ಟಿಯನ್ನು ಕೊಟ್ಟನು. ಆದರೆ ಶಂಕರರಾಯರು ತಾವು ಮಾಡಿದ ನಿಶ್ಚಯದಿಂದ ಸ್ವಲ್ಪಾದರೂ ಕದಲಲಿಲ್ಲ.



## ಶೇಟಜಿಯವರ ಔದಾರ್ಯವು.



ಶಂಕರರಾಯರು ಕಮಲಾದೇವಿಯನ್ನು ಕರೆದುಕೊಂಡು ಮುಂಬಯಿಗೆ ಹೊರಟು ಹೋದ ಮೇಲೆ ಕಮಲಾದೇವಿಯು ಬಳವಂತರಾಯನಿಗೆ ಗೌಪ್ಯವಾಗಿ ಒಂದು ಪತ್ರವನ್ನು ಬರೆದು ಕಳುಹಿಸಿದಳು. ಆ ಪತ್ರವು ಹೀಗೆ ಇತ್ತು:—

ಪ್ರಿಯತಮರಾದ ಬಳವಂತರಾಯರಿಗೆ—

ತಮ್ಮ ಗುಣಾತಿಶಯಗಳಿಂದ ಲುಬ್ಧಳಾದ ಕಮಲೆಯು ತಂದೆಯ ಹಟಕ್ಕಾಗಿ ನಿಮ್ಮನ್ನು ಬಿಟ್ಟು ಮುಂಬಯಿಗೆ ಹೋಗಿದ್ದಾಳೆ. ಆದರೆ ಆಕೆಯ ಜೀವವೆಲ್ಲ ನಿಮ್ಮನ್ನದಲ್ಲಿಯೇ ಇದೆ. ತಂದೆಯು ಈಗಿನ ವಿಚಾರಸರಣಿಯೇನೂ ಹಾಗೇ ಸ್ಥಿರವಾಗಿ ಉಳಿಯಲಿಕ್ಕಿಲ್ಲ. ಒಂದು ವೇಳೆ ಅವರು ಆಕೆಯ ಮನಸ್ಸಿನ ವಿರುದ್ಧವಾಗಿ ಹಟ ಹಿಡಿದರೆ ಅವಳ ಜೀವನ ಯಾತ್ರೆಯು ಅಲ್ಲಿಯೇ ಮುಗಿಯುವದೆಂದು ನಿಶ್ಚಯವಾಗಿ ತಿಳಿಯಬೇಕು.

ತಮ್ಮ ಪ್ರೇಮಲಾಲಸೆ
ಕಮಲಾ

ಈ ಪತ್ರವನ್ನು ನೋಡಿದೊಡನೆ ಆನಂದ ದುಃಖಗಳೆರಡೂ ಬಳವಂತನ ಅಂತಃಕರಣವನ್ನು ಮುತ್ತಿದುವು. ಕಮಲೆಯ ಉತ್ಕಟ ಪ್ರೇಮವು ಅವನಿಗೆ ಮನದಟ್ಟಾಯಿತು. ತಂದೆತಾಯಿಗಳ ಮಾತನ್ನು ಮೀರಿ ಅವರ ಮನಸ್ಸನ್ನು ನೋಯಿಸಲಾರದೆ ಕಮಲೆಯು ಅವರ ಸಂಗಡ ಹೋಗಬೇಕಾಯಿತೆಂದು ಅವನಿಗೆ ಕೂಡಲೇ ಹೊಳೆಯಿತು. ಆದರೆ ಶಂಕರರಾಯರು ತಮ್ಮ ಹಟವನ್ನೇ ಹಿಡಿದು ಕಮಲೆಯ ಬಗೆಯ ಆಕಾಂಕ್ಷೆಯನ್ನು ಧಿಕ್ಕರಿಸಿದರೆ

ಮುಂದೆ—? ಮುಂದೆ ಆಗಬಹುದಾದ ಅನಿಷ್ಟವನ್ನು ಚಿಂತಿಸಿ ಅವನ ಎದೆಯು 'ಝಿಲ್' ಎಂದಿತು.

ಈ ಪ್ರಕಾರ ಬಳವಂತನ ಮನಸ್ಸಿನಲ್ಲಿ ವಿಚಾರ ಪರಂಪರೆಗಳು ನಡೆದಿರುವಾಗ ರಾಮರಾಯನು ಆಕಸ್ಮಾತ್ತಾಗಿ ಅಲ್ಲಿಗೆ ಬಂದನು. ಬಳವಂತನ ಚಿಂತಾವ್ಯಾಕುಲವಾದ ಮೋರೆಯನ್ನು ನೋಡಿ ರಾಮರಾಯನು—"ಇದೇನೊ; ಬಹಳ ಘನ ವಿಚಾರ ನಡೆದಂತೆ ಕಾಣುತ್ತದೆ." ಎಂದು ಕೇಳಿದನು.

ಬಳವಂತರಾಯನು ಏನೂ ಮಾತಾಡದೆ ಅವನ ಕೈಯಲ್ಲಿ ಕಮಲೆಯ ಪತ್ರವನ್ನು ಕೊಟ್ಟನು.

ಪತ್ರವನ್ನು ಓದಿಕೊಂಡು ರಾಮರಾಯನು ಆನಂದದಿಂದ ಅರಳಿದ ಮುಖವುಳ್ಳವನಾಗಿ ನಗುತ್ತ-" ಈ ಪತ್ರವನ್ನು ನೋಡಿ ನಿನಗೆ ಚಿಂತೆಯೇಕೆ? ನೀನೊಬ್ಬ ಶುದ್ಧ ಹುಚ್ಚನು. ಏಳು ಏಳು, ಸಾಕು ಈ ಅಳುಮೋರೆಯು. ಕಮಲಾದೇವಿಯಂಥ ಪತ್ನಿಯು ಲಭಿಸಿದ್ದಕ್ಕೆ ನೀನು ಇಂದು ಸತ್ಯನಾರಾಯಣ ಮಾಡಿ ನಮ್ಮನ್ನೆಲ್ಲ ಊಟಕ್ಕೆ ಕರೆಯಬೇಕು."

ಬಳವಂತನು- " ನೀನು ಬಹಳ ಉತಾವಳಿ ಸ್ವಭಾವದವನು. ಬಾಧಕ ಪ್ರಮಾಣಗಳನ್ನು ಎಂದೂ ನೋಡುವದೇ ಇಲ್ಲ. ಶಂಕರರಾಯರು ಈ ಮದುವೆಯನ್ನು ವಿರೋಧಿಸಿದರೆ?"

ರಾಮೂ- " संशयात्मा विनश्यति " ಎಂದು ಭಗವಂತನು ಹೇಳಿದ್ದು ನುಳ್ಳಲ್ಲ. ಎಷ್ಟು ಸಂಶಯವಪ್ಪಾ ನಿನಗೆ? ಕಮಲೆಯ ಉತ್ಕಟ ಪ್ರೇಮದ ಮುಂದೆ ತಂದೆಯ ಆಟವೂ ಸಾಗುವದಿಲ್ಲ; ಯಾರ ಆಟವೂ ಸಾಗುವದಿಲ್ಲ. ಇಷ್ಟು ಹೇಗೆ ನಿನಗೆ ತಿಳಿಯುವದಿಲ್ಲ?"

ಇದಕ್ಕೆ ಬಳವಂತನು ಉತ್ತರವನ್ನು ಕೊಡದೆ ಸುಮ್ಮನಾದನು. ಅವನ ಮನಸ್ಸಿಗೆ ಸಮಾಧಾನವಾಗಲಿಲ್ಲ. ಅವನು ಬರಬರುತ್ತ ಚಿಂತಾಗ್ರಸ್ತನಾದಂತೆ ತೋರಹತ್ತಿದನು. ಅವನು ತನ್ನ ಕೆಲಸಗಳನ್ನು ಮೊದಲಿನಂತೆಯೇ ಸಾಗಿಸಿದ್ದೇನೋ ನಿಜ. ಆದರೆ ಅವನ ಮೋರೆಯ ಮೇಲೆ ಉದಾಸೀನತೆಯ ಕಳೆಯು ತೋರಹತ್ತಿತು. ಇದರ ಕಾರಣವು ರಾಮರಾಯನಿಗೆ ಎಂದೋ ತಿಳಿದಿತ್ತು. ಅವನು ಒಮ್ಮೆ ಬಳವಂತನಿಗೆ ತಿಳಿಯದಂತೆ ಭಗವಂತದಾಸ

ಶೇಟಜಿಯವರ ಕಡೆಗೆ ಹೋಗಿ ಬಳವಂತನ ಜೀವನದಲ್ಲಿ ಉಂಟಾದ ವಿರಸತೆಯ ಕಾರಣವನ್ನು ಅವರಿಗೆ ತಿಳಿಸಿದನು. ಶೇಟಜಿಯವರು ತಾವೇ ಮುಂಬಯಿಗೆ ಹೋಗಿ ಶಂಕರರಾಯರನ್ನು ಒಡಂಬಡಿಸಲು ಯತ್ನ ಮಾಡುವೆನೆಂದು ರಾಮರಾಯನಿಗೆ ಆಶ್ವಾಸನ ಕೊಟ್ಟನು.

ಮುಂದೆ ಒಂದೆರಡು ದಿವಸಗಳ ನಂತರ ತಮ್ಮ ಕೆಲಸದ ನಿಮಿತ್ತ ಮಾಡಿಕೊಂಡು ಶೇಟಜಿಯವರು ಮುಂಬಯಿಗೆ ಹೋದರು. ಆದರೆ ಅವರು ಯಾಕೆ ಹೋಗಿದ್ದರೆಂಬುದು ರಾಮರಾಯನಿಗೆ ಮಾತ್ರ ಗೊತ್ತಿತ್ತು.

ಶೇಟಜಿಯವರು ಮುಂಬಯಿಗೆ ಹೋಗಿ ಒಂದು ತಿಂಗಳ ವರೆಗೆ ಬರಲೇ ಇಲ್ಲ. ಆಗ ರಾಮರಾಯನೂ ಗಾಬರಿಯಾದನು. ಶಂಕರರಾಯರು ಪ್ರತಿಕೂಲರಾಗಬಹುದೆಂದು ಅವನಿಗೂ ಸಂಶಯ ಬರುತ್ತಿತ್ತು. ಬಳವಂತನಂಥ ದರಿದ್ರನಿಗೆ ಸಿರಿವಂತಿಕೆಯಿಂದ ಸೊಕ್ಕಿದ ಶಂಕರರಾಯರು ತಮ್ಮ ಮಗಳನ್ನು ಕೊಡಲಿಕ್ಕೆ ಒಪ್ಪಲಿಕ್ಕಿಲ್ಲೆಂದು ಅವನಿಗೂ ಭೀತಿಯುಂಟಾಯಿತು. ಈ ಪ್ರಕಾರ ಎಲ್ಲರ ಮೋರೆಯ ಮೇಲೆ ಚಿಂತೆಯ ಕಳೆಯು ಸುರಿಯುತ್ತಿರಲು, ಒಂದಾನೊಂದು ದಿವಸ ಸಾಯಂಕಾಲ ಐದು ಘಂಟೆಗೆ ಮುಂಬಯಿಯಿಂದ ಶೇಟಜಿಯವರ ಕಡೆಯಿಂದ ತಂತಿಯು ಬಂತು. "ಮದುವೆಯು ನಿಶ್ಚಯವಾಯಿತು. ನಾನು ನಾಳೆ ರೈಲಿಗೆ ಬರುವೆನು" ಎಂದು ಅದರ ತಾತ್ಪರ್ಯವು. ತಂತಿಯ ಸುವಾರ್ತೆಯನ್ನು ಕೇಳಿ ಎಲ್ಲರಿಗೂ ಆಶ್ಚರ್ಯ. ಎಲ್ಲರಿಗೂ ಆನಂದ. ತನ್ನ ಪ್ರೀತಿಯ ಸಮಾಜಕಾರ್ಯದಲ್ಲಿ ತನಗೆ ಒಮ್ಮನಸ್ಸಿನಿಂದ ಸಹಕಾರ ಮಾಡುವ ಸಹಧರ್ಮಿಣಿಯು ಸಿಕ್ಕಿದಳೆಂದು ಬಳವಂತರಾಯನಿಗೆ ಆನಂದವು. ಇಂಥ ವಿಚಾರಶೀಲಳೂ, ಗುಣವಂತೆಯೂ, ಆದ ಸೊಸೆಯು ಸಿಕ್ಕಳೆಂದು ರಾಧಾಬಾಯಿಗೂ ಹರುಷವು. ತಮ್ಮನ್ನು ಮಕ್ಕಳೆಂದು ನೋಡುತ್ತ ಅಕ್ಕರತೆಯಿಂದ ವಿದ್ಯೆಗಲಿಸುವ ಉಪಾಧ್ಯಾಯಿನಿಯು ತಿರುಗಿ ತಮಗೆ ಸ್ಥಿರವಾಗಿ ಲಭಿಸಿದಳೆಂದು ಮಿಶನ್ನದ ಹುಡುಗರಿಗೂ ಅಂದು ಹಿಗ್ಗಿನ ಸುಗ್ಗಿ.

* * * *

ಕಮಲಾದೇವಿಬಳವಂತರಾಯರ ವಿವಾಹವು ಬಹಳ ಸಂಭ್ರಮದಿಂದ ಚಂದ್ರಪುರದಲ್ಲಿ ನೆರವೇರಿತು. ವಿವಾಹವು ಒಂದೇ ದಿವಸದಲ್ಲಿ ಮುಗಿಯಿತು. ಬಂದ ಜನರಿಗೆ ಊಟ ತಿನಿಸುಗಳಿಗೇನೂ ಕಡಿಮೆಯಿದ್ದಿಲ್ಲ. ಆದರೆ ಒಂದು

ಪಾಲು ತಿನ್ನುವದು, ಎರಡು ಪಾಲು ಚೆಲ್ಲುವದು ಮಾತ್ರ ಇದ್ದಿಲ್ಲ. ಒಬ್ಬ ವೇದಶಾಸ್ತ್ರಪಾರಂಗತನಾದ ಸ್ವತಂತ್ರ ವಿಚಾರದ ವಿದ್ವಾಂಸನು ಪುರೋಹಿತ ಕಾರ್ಯವನ್ನು ಮಾಡಿದನು. ಮೊದಲು ಮಧ್ಯಾಹ್ನದವರೆಗೆ ಮಂತ್ರ ಪಠನಪೂರ್ವಕವಾದ ಪಾಣಿಗ್ರಹಣ ಲಗ್ನಹೋಮಾದಿಗಳು ಮುಗಿದುವು. ಆ ಮೇಲೆ ಸಾಯಂಕಾಲ ಶಾಸ್ತ್ರಿಗಳು ವೇದಮಂತ್ರಗಳ ಅರ್ಥವನ್ನು ವಧುವರರಿಗೂ ಕೂಡಿದ ಸ್ತ್ರೀಪುರುಷರಿಗೂ ಅತಿಸುಲಲಿತವಾಗಿ ತಿಳಿಸಿ ಹೇಳಿ ವಿವಾಹದ ಮಹತ್ವವನ್ನೂ ಅದರ ಧರ್ಮಗಳನ್ನೂ ವಿಶದವಾಗಿ ಹೇಳಿದರು. ವೇದಮಂತ್ರಗಳಲ್ಲಿ ಅಡಕವಾದ ಪವಿತ್ರ, ಗಂಭೀರ, ವಿಚಾರಗಳನ್ನೂ ಭಾವನೆಗಳನ್ನೂ ಕೇಳಿ ಎಲ್ಲರೂ ಮೆಚ್ಚಿ ತಲೆದೂಗಿದರು.

ಮದುವೆಯ ಎಲ್ಲ ವೆಚ್ಚವನ್ನು ಶೇಟಜಿಯವರೇ ನೋಡಿಕೊಂಡರು. ಬಳವಂತನು ಎಷ್ಟು ಬೇಡೆಂದರೂ ಶಂಕರರಾಯರು ಐದು ಸಾವಿರ ರೂಪಾಯಿ ವರದಕ್ಷಿಣೆ ಕೊಟ್ಟು ಅವನ್ನು ಕಮಲಾದೇವಿಯ ಹೆಸರಿನಿಂದ ಬ್ಯಾಂಕಿನಲ್ಲಿಟ್ಟರು. ದಂಪತಿಗಳು ಮೂಲಧನವನ್ನು ಹಿಡಿಯದೆ ಹಾಗೇ ಕಾದಿಟ್ಟು ಅದರ ಮೇಲಿನ ಬಡ್ಡಿಯನ್ನು ಮಾತ್ರ ಪ್ರಸಂಗ ಬಿದ್ದಾಗ ಉಪಯೋಗಿಸತಕ್ಕದ್ದು, ಇಲ್ಲದಿದ್ದರೆ ಹಾಗೇ ಮೂಲಧನದಲ್ಲಿ ಕೂಡಿಸಿ ಆಪದ್ಧನವೆಂದು ಇಟ್ಟುಕೊಳ್ಳತಕ್ಕದ್ದು — ಎಂದು ಶಂಕರರಾಯರು ಸೂಚನೆ ಮಾಡಿದರು. ಇಷ್ಟೆಲ್ಲ ವರದಕ್ಷಿಣೆಯನ್ನು ಸ್ವೀಕರಿಸಿದ ಮೇಲೆ ಅದಕ್ಕೆ ತಕ್ಕ ಬಂಗಾರವನ್ನೆಲ್ಲಿ ತರಬೇಕೆಂದು ರಾಧಾಬಾಯಿಯವರು ಚಿಂತೆ ಮಾಡಲು ಕಮಲಾದೇವಿಯು ಮಂಗಲ ಸೂತ್ರದ ಹೊರತಾಗಿ ತನಗೆ ಬೆಳ್ಳಿ ಬಂಗಾರದ ಯಾವ ವಸ್ತುಗಳೂ ಬೇಡೆಂದು ತಿಳಿಸಿ ಅವರಿಗೆ ಸಮಾಧಾನ ಹೇಳಿದಳು. ಆದರೂ ಶೋಭೆಗಾಗಿ ಕೆಲವು ಆಭರಣಗಳು ಬೇಕೇಬೇಕೆಂದು ತಿಳಿದು ಅವರು ಮನಸ್ಸಿನ್ವ್ಯಾಕುಲ ಹೊಂದುತ್ತಿರಲು, ಇದು ಅಪ್ಪಾಸಾಹೇಬನಿಗೆ ತಿಳಿದು ಅವನು ತನ್ನ ಮನೆಯೊಳಗಿನ ಬಂಗಾರದ ಸರಿಗೆಯನ್ನೂ ಕಂಕಣಗಳನ್ನೂ ಮುತ್ತಿನ ಬೆಂಡೋಲೆಗಳನ್ನೂ ಕಮಲಾದೇವಿಗೆ ಲಗ್ನಕಾಲದಲ್ಲಿ ಕೊಟ್ಟನು. ರಾಧಾಬಾಯಿ ಮೊದಲಾದ ಕೂಡಿದ ಜನರ ಮನಸ್ಸಿನ ವಿರುದ್ಧವಾಗಿ ನಡೆಯಲಾರದೆ ಕಮಲಾದೇವಿಯು ವಿವಾಹ ಕಾಲದಲ್ಲಿ ಮಾತ್ರ ಅವುಗಳನ್ನು ಧರಿಸಿದಳು.

ಲಗ್ನಕಾಲದಲ್ಲಿ ವಧೂವರರಿಗೆ ಅನೇಕ ಉಡುಗರೆಗಳು ಬಂದವು. ಶಂಕರ ರಾಯರು ತಮ್ಮ ಮಗಳಿಗೂ ಅಳಿಯನಿಗೂ ಕೊಟ್ಟ ಉಡುಗರೆಗಳಿಗಿಂತ ಹೆಚ್ಚಿನ ಉಡುಗರೆಗಳನ್ನು ಶೇಟಜಿಯವರೂ ಇನಾಮುದಾರ ಅಪ್ಪಾಸಾಹೇಬನೂ ಅವರಿಗೆ ಸಮರ್ಪಿಸಿದರು. ವಿನಾಯಕನು ತನ್ನ ತಂಗಿಗೆ ಒಂದು ವಜ್ರದುಂಗರವನ್ನು ಕೊಡಲು, ಅಪ್ಪಾಸಾಹೇಬನು ಬಳವಂತನಿಗೆ ಒಂದು ಕಂಠಿಯನ್ನು ಕೊಟ್ಟನು.

ಶಂಕರರಾಯರಂಥ ಶ್ರೀಮಂತಿಕೆಯ ಹೆಮ್ಮೆಯುಳ್ಳ ಗೃಹಸ್ಥರು ಬಳವಂತನಂಥ ಹೊಲಮನೆಗಳಿಲ್ಲದ ನಿರ್ಧನನಿಗೆ ತಮ್ಮ ಮಗಳನ್ನು ಕೊಡಲು ಹೇಗೆ ಒಡಂಬಟ್ಟರೆಂದು ರಾಮರಾಯನಿಗೂ ರಾಧಾಬಾಯಿಗೂ ಉಳಿದ ಜನರಿಗೂ ಒಂದು ತೊಡಕು ಬಿದ್ದಿತ್ತು. ಆದರೆ ಶೇಟಜಿಯವರು ಮುಂಬಯಿಯಲ್ಲಿ ನಡೆಯಿಸಿದ ಮಹತ್ಕಾರ್ಯವು ಅವರ ಕಿವಿಯತನಕ ಬರಲು ಅವರೆಲ್ಲರು ಶೇಟಜಿಯವರ ಔದಾರ್ಯವನ್ನೂ ಗುಣಗ್ರಾಹಕತೆಯನ್ನೂ ಬಹಳವಾಗಿ ಕೊಂಡಾಡಿದರು.

ಬಳವಂತನು ನಿರ್ಧನನೆಂದು ಶಂಕರರಾಯರು ಅವನಿಗೆ ತಮ್ಮ ಮಗಳನ್ನು ಕೊಡಲಿಕ್ಕೆ ಒಪ್ಪಿದ್ದಿಲ್ಲವೆಂದು ವಾಚಕರಿಗೆ ಇಷ್ಟರೊಳಗಾಗಿ ಹೊಳೆದಿರಬಹುದು. ಆದರೆ ಶೇಟಜಿಯವರು ಇದೇ ವೇಳೆಗೆ ತಮ್ಮ ಮೃತ್ಯುಪತ್ರವನ್ನು ಮಾಡಿ, ತಮ್ಮ ಎಲ್ಲ ಆಸ್ತಿಯ ವ್ಯವಸ್ಥೆಯನ್ನು ಹಚ್ಚಿದರು. ಅವರು ತಮ್ಮ ಹದಿನಾಲ್ಕು ಲಕ್ಷ ರೂಪಾಯಿಗಳ ಆಸ್ತಿಯೊಳಗೆ ಹತ್ತು ಲಕ್ಷ ಬೆಲೆಯ ಆಸ್ತಿಯನ್ನು ತಮ್ಮ ಇಬ್ಬರು ಮಕ್ಕಳಿಗೂ ಎರಡು ಲಕ್ಷ ಆಸ್ತಿಯನ್ನು ತಮ್ಮ ಪತ್ನಿಗೂ ಕೊಟ್ಟರು. ಐವತ್ತು ಸಾವಿರ ರೂಪಾಯಿಗಳನ್ನು ಗೋಶಾಲೆಗೂ ಮತ್ತೆ ಐವತ್ತು ಸಾವಿರವನ್ನು ಹಿಂದೂ ಮಿಶನ್ನಿಗೂ ಬರೆದು ಕೊಟ್ಟರು. ಉಳಿದ ಆಸ್ತಿಯಲ್ಲಿ ಇಪ್ಪತ್ತೈದು ಸಾವಿರ ರೂಪಾಯಿಗಳು ಬಳವಂತರಾಯನಿಗೆ ಸಲ್ಲತಕ್ಕದ್ದೆಂತಲೂ ಈ ದುಡ್ಡನ್ನು ಅವನು ಯಾವ ಸಂಸ್ಥೆಗೂ ಕೊಡದೆ ಅದರ ಬಡ್ಡಿಯನ್ನು ಮಾತ್ರ ವಿನಿಯೋಗಿಸಬಹುದೆಂತಲೂ ಅವರು ಮೃತ್ಯುಪತ್ರದಲ್ಲಿ ಬರೆದಿಟ್ಟರು. ಬಳವಂತನಿಗೆ ಕೊಟ್ಟ ದುಡ್ಡಿನ ಬಗ್ಗೆ ಈ ಪ್ರಕಾರ ನಿರ್ಬಂಧಗಳನ್ನು ಹಾಕಿಸಿದವರು ಶಂಕರರಾಯರೇ. ಇಷ್ಟೆಲ್ಲ

ಆದ ಮೇಲೆಯೇ ಶಂಕರರಾಯರು ಬಳವಂತನಿಗೆ ತಮ್ಮ ಮಗಳನ್ನು ಕೊಡ ಲಿಕ್ಕೆ ಒಪ್ಪಿಕೊಂಡರು.

ಬಳವಂತನಿಗೆ ಆಸ್ತಿಯನ್ನು ಹಾಕಿಕೊಟ್ಟ ಸಂಗತಿಯನ್ನು ಗೌಪ್ಯ ವಾಗಿಡಬೇಕೆಂದು ಶೇಟಜಿಯವರು ಶಂಕರರಾಯರಿಗೆ ಹೇಳಿದ್ದರು. ಆದರೆ ಶಂಕರರಾಯರು ಈ ಗುಟ್ಟನ್ನು ತಮ್ಮ ಹೆಂಡತಿಗೆ ಹೇಳಿದರು. ಮುಂದೆ ಅದು ಪಾರ್ವತಿಬಾಯಿಯವರಿಂದ ವಿನಾಯಕನಿಗೂ ವಿನಾಯಕನಿಂದ ಉಳಿ ದವರಿಗೂ ತಿಳಿಯಿತು. ಹೀಗೆ ಶೇಟಜಿಯವರು ಮಾಡಿದ ಉಪಕಾರವನ್ನು ನೋಡಿ ಬಳವಂತನಿಗೆ ಕೃತಜ್ಞತೆಯೂ ಪೂಜ್ಯಬುದ್ಧಿಯೂ ಉಕ್ಕೇರಿ ಬಂದುವು. ಅವನು ತತ್‌ಕ್ಷಣವೇ ಶೇಟಜಿಯವರ ಕಡೆಗೆ ಹೋಗಿ ಅವರ ಪಾದಮುಟ್ಟಿ ನಮಸ್ಕರಿಸಿ ಪ್ರೇಮಾಶ್ರುಗಳಿಂದ ಕುತ್ತಿಗೆಶಿರ ಬಗಿದವನಾಗಿ –"ಸ್ವಾಮಿಾ, ತಾವು ಇದೇನು ಮಾಡಿದಿರಿ? ತಮ್ಮ ಉಪಕಾರದ ಭಾರವನ್ನು ನಾನೆಂತು ಹೊರಲಿ?" ಎಂದನು.

ಶೇಟಜಿ–"ಬಳವಂತರಾವ, ಧ್ಯೇಯದ ಸಲುವಾಗಿ ನಿಃಸ್ವಾರ್ಥತೆ ಯಿಂದಲೂ, ಒಮ್ಮನಸ್ಸಿನಿಂದಲೂ ಕೆಲಸ ಮಾಡುವಂಥ ನಿಮ್ಮಂಥ ಮನು ಷ್ಯನು ನನಗೆ ಮಗನಾಗಿದ್ದರೆ ನೆಟ್ಟಗಾಗುತ್ತಿತ್ತು. ನಾನು ನಿಮಗೆ ಕೊಟ್ಟಿ ದ್ದೇನೂ ಬಹಳವಲ್ಲ. ಇದಕ್ಕೂ ಹೆಚ್ಚಿಗೆ ಕೊಡಲಿಕ್ಕೆ ಆಗಲಿಲ್ಲವೆಂದು ನನಗೆ ವಿಷಾದವಾಗಿದೆ. ನೀವು ಈ ಆಸ್ತಿಯನ್ನು ಕೇವಲ ಸಮಾಜ ಹಿತಕ್ಕಾಗಿಯೇ ವಿನಿಯೋಗಿಸಿ ಕೀರ್ತಿವಂತರಾಗುವಿರೆಂಬುದರಲ್ಲಿ ನನಗೇನೂ ಸಂದೇಹವಿಲ್ಲ. ನಿಮ್ಮಿಂದಲೇ ಈ ನನ್ನ ಸಿರಿವಂತಿಕೆಯು ಸಾರ್ಥಕವಾಗಿ ಧರ್ಮಮಾರ್ಗ ದಿಂದ ಹರಿಯಹತ್ತಿದೆ" ಎಂದು ಅವನನ್ನು ಕೊಂಡಾಡಿದನು.

ಮನೆಗೆ ಬಂದ ಮೇಲೆ ಬಳವಂತನು ನಡೆದ ಸಂಗತಿಗಳನ್ನು ರಾಮ ರಾಯನಿಗೆ ತಿಳಿಸಿದನು.

ರಾಮರಾಯನು–"ಬಳವಂತಾ, ಈ ಮೋಹಿನೀ ವಿದ್ಯೆಯನ್ನು ನಿನಗೆ ಯಾರು ಕಲಿಸಿದರು? ಈ ವಿದ್ಯೆಯಿಂದಲೇ ಕಮಲಾದೇವಿಯಂಥ ಸ್ತ್ರೀ ರತ್ನವು ನಿನಗೆ ಹಸ್ತಗತವಾಯಿತು. ಈ ವಿದ್ಯೆಯಿಂದಲೇ ಶೇಟಜಿಯನ್ನು ಮರುಳು ಮಾಡಿ ಸಹಸ್ರಾವಧಿ ರೂಪಾಯಿಗಳನ್ನು ಅವನಿಂದ ಬರಮಾಡಿ ಕೊಂಡಿ. ಮೇಲಾಗಿ ನಾವೆಲ್ಲಾ ನೀನು ಹೇಳಿದಂತೆ ನಿನ್ನ ಸುತ್ತಲೂ ಕುಣಿ

ಯಲಿಕ್ಕೆ ಸಿದ್ಧರಾಗಿದ್ದೇವೆ. ನನಗಷ್ಟು ನಿನ್ನ ವಿದ್ಯೆಯನ್ನು ಕಲಿಸಬಾರದೇ?" ಎಂದು ಚೇಷ್ಟೆ ಮಾಡಿದನು.

ಕಮಲಾದೇವಿ ಈ ಮಾತು ಕೇಳಿ ನಸುನಗುತ್ತ- "ರಾಮರಾಯರೇ, ಈ ವಿದ್ಯೆಯು ಎಲ್ಲರಿಗೂ ಹೇಗೆ ಸಾಧಿಸೀತು? ಎಷ್ಟೋ ದಿವಸ ತಪಸ್ಸು ಮಾಡಿದ ಮೇಲೆ ಮಾತ್ರ ಬರುತ್ತದೆ ಈ ವಿದ್ಯೆಯು; ಅಲ್ಲದೆ ಅದೇನು ಹುಡುಗಾಟಿಕೆಯೇ?" ಎಂದು ನುಡಿದಳು.

ರಾಧಾಬಾಯಿಯು- "ಎಲ್ಲಿಯ ತಪಸ್ಸು? ಎಲ್ಲರಿಗೂ ಪ್ರೇರಣೆ ಮಾಡುವವನು ಭಗವಂತನು" ಎಂದು ದೇವರಿಗೆ ಕೈ ಮುಗಿದಳು.

ಬಳವಂತನೂ ಭಕ್ತಿಪರವಶನಾಗಿ ದೈವರಿಗೆ ಕೈಜೋಡಿಸಿ ಧ್ಯಾನಸ್ಥನಾದನು.

**ಸಮಾಪ್ತ.**